

# ಸಿದ್ಧಗಂಗಾ

ಡಿಸೆಂಬರ್ ೧೯೯೯



ಬ್ಯಾಲಕೆರೆಯಲ್ಲಿ ಡಿಸೆಂಬರ್ ೧೪ ರಂದು ನಡೆದ ಶರಣ ಮೇಳದ ದಿವ್ಯಸಾನಿಧ್ಯ ವಹಿಸಿದ್ದ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಅನುಗ್ರಹ ಭಾಷಣ ಮಾಡುತ್ತಿರುವುದು. ಚಿತ್ರದಲ್ಲಿ ಗದ್ದುಗೆ ಮಠದ ಪೂಜ್ಯ ಶ್ರೀ ಶ್ರೀ ಮಹಾಂತೇಶ ಸ್ವಾಮಿಗಳು, ಶ್ರೀ ಎಚ್. ಎಸ್. ಸಿದ್ಧಗಂಗಪ್ಪ ಮತ್ತು ಪ್ರೊ. ಹೆಚ್. ವಿ. ವೀರಭದ್ರಯ್ಯ ಅವರನ್ನು ಕಾಣಬಹುದು.






ಪ್ರಧಾನ ಸಂಪಾದಕರು
ಚನ್ನಪ್ಪ ಎರೇಸೀಮೆ

ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

ಸಹ ಸಂಪಾದಕರು
ಎಚ್. ಎಸ್. ಸಿದ್ಧಗಂಗಪ್ಪ
ಎಂ. ರೇಣುಕಾರಾಧ್ಯ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪

ಸಲಹಾ ಸಮಿತಿ
ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ
ಗೊ.ರು. ಚನ್ನಬಸಪ್ಪ
ಟಿ.ಆರ್. ಮಹಾದೇವಯ್ಯ
ಪ್ರೊ. ಆರ್. ರಾಚಪ್ಪ
ಟಿ. ಕೆ. ನಂಜುಂಡಪ್ಪ
ಡಾ. ಎಂ.ಎಸ್. ಚನ್ನಬಸಪ್ಪ
ಪಿ.ಎಸ್. ಪುಟ್ಟಶಂಕರಯ್ಯ
ಬಿ. ಎಸ್. ಪರಮಶಿವಯ್ಯ

ಸದಸ್ಯರು
ಕೆ.ಎಸ್. ಶಂಕರಯ್ಯ
ಸಿ. ಎಸ್. ಸಿದ್ಧಲಿಂಗಯ್ಯ
ಪಿ. ವಿ. ಹುಚ್ಚವೀರಯ್ಯ
ಕೆ. ಸಿ. ಶಿವಗಂಗಯ್ಯ
ಎಸ್. ವಿಶ್ವನಾಥ್
ಪಿ.ಎನ್. ಚಂದ್ರಶೇಖರಯ್ಯ
ಕೆ.ಎಚ್. ಶಿವರುದ್ರಯ್ಯ

ಮುದ್ರಕರು :
ಗೀತಾಂಜಲಿ ಪ್ರಿಂಟರ್ಸ್, ನಂ. ೫,
ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು-೫೪
ದೂರವಾಣಿ - ೩೩೪೪೪೦೭


**ಲೇಖಕರ ಅಭಿಪ್ರಾಯಗಳು ಶ್ರೀ ಮಠದ ಅಭಿಪ್ರಾಯಗಳಲ್ಲ**



॥ ಓಂ ಶ್ರೀ ಗುರು ಬಸವ ಲಿಂಗಾಯನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೩೫    ಡಿಸೆಂಬರ್ ೧೯೯೯    ಸಂಚಿಕೆ : ೧೨

## ಪುಟಗಳಲ್ಲಿ .....




**ವಿಳಾಸ :**
"ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪

**ಚಂದಾ ವಿವರ :**
ವಾರ್ಷಿಕ ಚಂದಾ ರೂ. ೬೦.
ಆಜೀವ ಸದಸ್ಯತ್ವ ರೂ. ೫೦೦.
ಬಿಡಿ ಪ್ರತಿ ರೂ. ೫.00

## ಸಿಂಹಾವಲೋಕನ .......

ಪ್ರಿಯರೆ,

ಈ ಡಿಸೆಬರ್ ಈ ಶತಮಾನದ ಕೊನೆಯ ಮಾಸ. ಒಂದು ಶತಮಾನವನ್ನು ಹಿಂದಕ್ಕೆ ತಿರುಗಿ ನೋಡುವ ಕೊನೆಯ ಅವಕಾಶ. ಕಳೆದ ನೂರು ಸಂವತ್ಸರಗಳನ್ನು ನೆನೆದಾಗ ಹಿಗ್ಗು-ಕುಗ್ಗುಗಳೆರಡೂ ಎದುರಾಗುತ್ತವೆ. ಭರತ ವರ್ಷವಂತೂ ಭಾಗ್ಯರವಿಯನ್ನು, ಸ್ವಾತಂತ್ರ್ಯದ ಸೂರ್ಯನನ್ನು ದರ್ಶಿಸಿದಂಥ ಶತಮಾನ. ಜಾಗತಿಕ ದೃಷ್ಟಿಯಿಂದ ಗಮನಿಸಿದಾಗ ಮಹಾಯುದ್ಧಗಳಿಂದಾಗಿ ರಕ್ತದ ಕಾಲುವೆ ಹರಿದ ದುರಂತ ಈ ಶತಮಾನಕ್ಕೆ ಅಂಟಿಕೊಂಡ ಶಾಪ. ಮಹಾತ್ಮ ಗಾಂಧೀಜಿಯವರಂಥ ಅರೆಬೆತ್ತಲೆಯ ಫಕೀರ ನೆಲದ ಮೇಲೆ ಓಡಾಡಿ ನಿಶಸ್ತ್ರಧಾರಿಯಾಗಿ ಒಂದು ರಾಷ್ಟ್ರವನ್ನು ಎತ್ತಿನಿಲ್ಲಿಸಿದ ಮಹತ್ವ ಈ ನೂರು ವರ್ಷಗಳ ಅವಧಿಯಲ್ಲಿಯೇ. ಸೋವಿಯಟ್ ರಷ್ಯಾದಂಥ ಸಮುಷ್ಟಿತ್ವಾಧಾರಿತ ರಾಜಕೀಯ ವ್ಯವಸ್ಥೆ ಕುಸಿದು ಬಿದ್ದುದನ್ನೂ ಈ ಅವಧಿ ಸಾಬೀತುಗೊಳಿಸಿತು. ಅರವಿಂದರು, ವಿವೇಕಾನಂದರು, ರವೀಂದ್ರರು, ಕುವೆಂಪು, ಬೇಂದ್ರೆ, ಕಾರಂತ, ಮುಂತಾದ ವಿಶ್ವ ಚೇತನಗಳು ಅರಳಿದ ಶತಮಾನ ಇದೇ ನೂರು ವರ್ಷಗಳಲ್ಲಿ. ವಿಜ್ಞಾನ ಕ್ಷೇತ್ರವಂತೂ ಅನೂಹ್ಯವಾಗಿ ಬೆಳೆದು ಸಮಸ್ತ ಜಗತ್ತನ್ನು ಅಂಗೈಯ ನೆಲ್ಲಿಯಾಗಿಸಿದ ಹೆಗ್ಗಳಿಕೆ ಇಪ್ಪತ್ತನೆಯ ಶತಮಾನಕ್ಕೆ. ನೆಹರು, ಲಾಲ್‌ಬಹದ್ದೂರ್ ಶಾಸ್ತ್ರಿ ಇಂದಿರಾ ಗಾಂಧಿ, ಸುಭಾಷ್‌ಚಂದ್ರ ಬೋಸ್, ವಲ್ಲಭಭಾಯಿ ಪಟೇಲ್, ಬಾಬುರಾಜೇಂದ್ರ ಪ್ರಸಾದ್‌ರಂಥ ರಾಜಕೀಯ ನಕ್ಷತ್ರಗಳಿಂದ ರಾಷ್ಟ್ರರಥ ಚಲಿಸಿದುದು ಈ ಅವಧಿಯಲ್ಲಿ. ಹರಿದು ಹಂಚಿ ಹೋಗಿದ್ದ ಕನ್ನಡ ನಾಡು ಮತ್ತೆ ಒಂದಾಯಿತು. ಮೈಸೂರು, ವಿಶಾಲ ಮೈಸೂರು, ಕರ್ನಾಟಕ ಎಂದು ಹೆಸರಾದದ್ದು ಈ ಯುಗಮಾನದಲ್ಲಿ. ಕನ್ನಡದ ಮಣ್ಣಿನ ಮಗನೊಬ್ಬ ಅಖಂಡ ಭರತ ಖಂಡದ ಪ್ರಧಾನಿಯಾಗಿ ಕನ್ನಡಿಗರೆಲ್ಲರ ಅಭಿಮಾನಕ್ಕೆ, ಪ್ರೀತಿ ಆದರಗಳಿಗೆ ಪಾತ್ರವಾದದ್ದೇನೂ ಕಡಿಮೆ ಸಾಧನೆಯಲ್ಲ.

ಧಾರ್ಮಿಕ, ಸಾಹಿತ್ಯ, ಕಲಾಕ್ಷೇತ್ರಗಳಲ್ಲಿ ಅದ್ಭುತಗಳೇ ನಡೆದು ಹೋದವು. ಕರ್ನಾಟಕದ ಉದ್ದಗಲಗಳಲ್ಲಿ ವೀರಶೈವ ಮಠಗಳು ಶಿಕ್ಷಣ ಪ್ರಸಾರವನ್ನು ತಮ್ಮ ಮೂಲಭೂತ ಕರ್ತವ್ಯವೆಂಬಂತೆ ಅನುಷ್ಠಾನಕ್ಕೆ ತಂದವು. ಕತ್ತಲಲ್ಲಿ ಕಮರಿ ಹೋಗುತ್ತಿದ್ದ ಸಾವಿರಾರು ಪ್ರತಿಭೆಗಳನ್ನು ಉದ್ದೇಪಿಸಿದವು; ಜಗತ್ತಿಗೆ ಪರಿಚಯಿಸಿದವು. ಲೋಕ ಕಲ್ಯಾಣಕ್ಕಾಗಿ ಜೋಳಿಗೆ ಹಿಡಿದು ನಡೆದವು. ಜಂಗಮ ಜಗತ್ತಿಗೆ ತಮ್ಮನ್ನರ್ಪಿಸಿಕೊಂಡವು. ಸಾಹಿತ್ಯ ಲೋಕದಲ್ಲಿ ಗಮನಾರ್ಹ ಪ್ರಗತಿ, ಬದಲಾವಣೆಗಳಾದವು. ಕಾವ್ಯ ಕಾವ್ಯಕ್ಕಾಗಿ ಅಲ್ಲ, ಕಾವ್ಯ ಜೀವನಕ್ಕಾಗಿ ಎಂಬುದನ್ನರಿತಾಯಿತು. 'ಖಡ್ಗವಾಗಲಿ ಕಾವ್ಯ' ಎಂದದ್ದು, 'ಮಾನವೀಯತೆಯ ದೀಪ ಹೊಚ್ಚಲಿ ಅಕ್ಷರ ಕೃಷಿ' ಎಂದು ಕಂಡು ಕೊಂಡದ್ದಾಯಿತು. ನಾಯಿ, ಬೆಕ್ಕುಗಳಿಗಿಂತ ಮನುಷ್ಯ ಕೀಳಲ್ಲ ಎಂಬ ಸತ್ಯದರ್ಶನ ಕಾಣಬಂದಿತು. ಟಿ.ವಿ., ಅಂತರ್ಜಾಲಗಳಂಥ, ಮಾಹಿತಿ ತಂತ್ರಜ್ಞಾನದಂಥ ತಂತ್ರವಿಜ್ಞಾನ ಸಮೃದ್ಧವಾಗಿ ಬೆಳೆಯಿತು.

ನೂರು ವರ್ಷಗಳ ಸಾಧನೆ ಕ್ಷಿಪ್ರಪ್ರಗತಿಗೆ ಸಿಕ್ಕಿ ಇದೀಗ ಹತ್ತು ವರ್ಷಗಳಲ್ಲಿ ಸಾಧ್ಯವಾಗುವಂತೆ ಕೃಷಿ, ವ್ಯಾಪಾರ, ಕೈಗಾರಿಕೆಯಂಥ ಕ್ಷೇತ್ರಗಳಲ್ಲಿ ಕಾಣಬಂದಿತು. ಇದೆಲ್ಲವೂ ನಡೆಯಿತು ನಿಜ. ಆದರೆ, ಆದರೆ, ಮನುಷ್ಯ ಜೀವನಕಲೆಯನ್ನೇ ಮರೆತಿದ್ದಾನೆ ಎಂಬ ಅನುಭಾವವಾಣಿಯೂ ವಾಸ್ತವಿಕಗೊಂಡಿರುವುದೂ ಇಲ್ಲಿಯೇ. .

ಬಾಹ್ಯದ ಅಭಿವೃದ್ಧಿ ಹೆಚ್ಚಾದಂತೆ ಆತಂಕ ಕುಬ್ಜತೆ ಬೆಳೆಯುತ್ತಾ ಬಂದಿತು. ಸಂಕುಚಿತಭಾವನೆ, ಸ್ವಾರ್ಥಸಾಧನೆ, ಹೃದಯರಾಹಿತ್ಯ ವರ್ತನೆ, ಪಾರ್ಥೇನಿಯಂನಂತೆ ಬೆಳೆದುಬಿಟ್ಟವು. ಹಣ, ಅಧಿಕಾರ ಭೋಗಗಳೆಂಬ ಮಲತ್ರಯಗಳಲ್ಲಿ ಜೀವನ ನರಳುವಂತಾಯಿತು. ಕಾಲ ಮತ್ತು ಲೋಕಗಳೆರಡೂ ನಿಟ್ಟುಸಿರು ಬಿಡುತ್ತ ಮುಂದಿನ ಶತಮಾನಕ್ಕೆ ಹೆಜ್ಜೆಯಿಡುವಂತಾಯಿತು. ಹಿರಿಯರ ಮಾರ್ಗ ಕಿರಿದಾಗುತ್ತ ಸಾಗುವಂತಾಯಿತು. ವಿಷಾದ-ಹರ್ಷಗಳೆರಡೂ ನಡೆಯುವುದು ಲೋಕಧರ್ಮ ತಾನೆ?

೨೧ನೆಯ ಶತಮಾನವನ್ನು ತುಂಬು ಹೃದಯದಿಂದ 'ಸಿದ್ಧಗಂಗಾ' ಸ್ವಾಗತಿಸುತ್ತ, ಮೂವತ್ತೈದು ವರ್ಷಗಳಿಂದ ನಡೆದು ಬರಲು ಸಹಕರಿಸಿದ, ಪತ್ರಿಕೆಯ ಪ್ರಗತಿಗೆ ಕಾರಣರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ, ಹಳೆಯ ವಿದ್ಯಾರ್ಥಿ ಸಂಘಕ್ಕೆ, ಜಾಹಿರಾತು ನೀಡುತ್ತ ಬಂದ ಸಂಘ-ಸಂಸ್ಥೆಗಳಿಗೆ, ಲೇಖಕರಿಗೆ, ಆಜೀವ ಸದಸ್ಯರಿಗೆ, ಚಂದಾದಾರರಿಗೆ, ಪ್ರಕಾಶಕರಿಗೆ, ಸಂಪಾದಕ ವರ್ಗದವರಿಗೆ, ಸಲಹಾ ಸಮಿತಿ ಸದಸ್ಯರಿಗೆ, ಪತ್ರಿಕಾ ಬಳಗಕ್ಕೆ, ಮುದ್ರಣಾಲಯದ ಬಂಧುಗಳಿಗೆ ವಂದನೆಗಳನ್ನು ಸಲ್ಲಿಸುತ್ತದೆ.

ಸಂಪಾದಕ





## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಎದ್ದೂನೆ ನಿಮ್ಮ ಧ್ಯಾನ ಏಳುತಲೆ ನಿಮ್ಮ ಧ್ಯಾನ
ನಿದ್ದೆಗಣ್ಣಾಗೆ ನಿಮ್ಮ ಧ್ಯಾನ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕುಂತಲ್ಲಿ ನಿಮ್ಮ ಧ್ಯಾನ ನಿಂತಲ್ಲಿ ನಿಮ್ಮ ಧ್ಯಾನ
ಸಂತೆಯೊಳು ಗುರುವೆ ನಿಮ್ಮ ಧ್ಯಾನ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕೊಂಬಾಗ ನಿಮ್ಮ ಧ್ಯಾನ ಕೊಡುವಾಗ ನಿಮ್ಮ ಧ್ಯಾನ
ಉಂಬಾಗ ಉಡುವಾಗ ನಿಮ್ಮ ದ್ಯಾನ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನುಡಿವಾಗ ನಿಮ್ಮ ಧ್ಯಾನ ನಡೆವಾಗ ನಿಮ್ಮ ಧ್ಯಾನ
ಎಡೆಬಿಡದೆ ಮಾಡುವೆ ನಿಮ್ಮ ಧ್ಯಾನ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸತಿಯೊಡನೆ ಇರುವಾಗ ಸುತರೊಡನೆ ಇರುವಾಗ
ಹಿತವಂತರೊಡನೆ ಇರುವಾಗ ನಿಮ್ಮ ಧ್ಯಾನ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೋಡುವಲಿ ನಿಮ್ಮ ಧ್ಯಾನ ಕೇಳುವಲಿ ನಿಮ್ಮ ಧ್ಯಾನ
ಮನವನೆನಹಿನ ತುಂಬ ನಿಮ್ಮ ಧ್ಯಾನ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕನಸಿನಲಿ ನಿಮ್ಮ ಧ್ಯಾನ ನೆನಪಿನಲಿ ನಿಮ್ಮ ಧ್ಯಾನ
ಅನುಕ್ಷಣವೂ ನಿಮ್ಮ ಧ್ಯಾನ ಘನ ಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಓಡ್ವಾಗ ನಿಮ್ಮ ಧ್ಯಾನ ಬರೆವಾಗ ನಿಮ್ಮ ಧ್ಯಾನ
ಬುದ್ಧಿ ನುಡಿಕೇಳುವಲಿ ನಿಮ್ಮ ಧ್ಯಾನ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಗುವಾಗ ನಿಮ್ಮ ಧ್ಯಾನ ಅಳುವಾಗ ನಿಮ್ಮ ಧ್ಯಾನ
ಮಲಗುವ ಮೊದಲೊಳು ನಿಮ್ಮ ಧ್ಯಾನ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತಾಯಿಯ ನೆನೆವಾಗ ತಂದೆಯ ನೆನೆವಾಗ
ಬಂಧು ಬಳಗವನು ನೆನೆವಾಗ ನಿಮ್ಮ ಧ್ಯಾನ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

- ಹೆಚ್.ವಿ. ವೀರಭದ್ರಯ್ಯ



## ಶ್ರೀ ವಾಣಿ

ಜವಾಬ್ದಾರಿ ವ್ಯಕ್ತಿತ್ವ ವಿಕಾಸದ ಸೋಪಾನ. ಹುಟ್ಟಿದ ಪ್ರತಿಯೊಂದು ಜೀವ ಜಂತುವಿಗೂ ಜವಾಬ್ದಾರಿಯುಂಟು. ಪಶು, ಪಕ್ಷಿ, ಕ್ರಿಮಿ, ಕೀಟ ಒಂದೊಂದಕ್ಕೂ ತನ್ನದೇ ಆದ ಜವಾಬ್ದಾರಿಯಿರುತ್ತದೆ. ಅಂತೆಯೇ ಮನುಷ್ಯನಿಗೂ ಜವಾಬ್ದಾರಿಯಿದೆ. ಸ್ತ್ರೀಯಾಗಿರಲಿ, ಪುರುಷನಾಗಿರಲಿ ಜವಾಬ್ದಾರಿಯಿಲ್ಲದಿರುವಂತೆಯೇ ಇಲ್ಲ. ಕೌಟುಂಬಿಕ ಪರಿಸರದಿಂದ ಮೊದಲುಗೊಂಡು ರಾಷ್ಟ್ರೀಯ, ಅಂತರರಾಷ್ಟ್ರೀಯ ಹಂತದವರೆಗೆ ವ್ಯಕ್ತಿಗೆ ಜವಾಬ್ದಾರಿಯಿರುತ್ತದೆ. ಸಾಮಾನ್ಯವಾಗಿ ಕುಟುಂಬದಲ್ಲಿ ಗೃಹಿಣಿಯಾದವಳಿಗೆ ತನ್ನ ಗಂಡ, ಮಕ್ಕಳು, ಬಂಧು-ಬಳಗ, ಕಳ್ಳುಬಳ್ಳಿ, ನೆರೆಹೊರೆಯ ಆರೈಕೆ ಮಾಡುವ ಜವಾಬ್ದಾರಿಯಿದ್ದರೆ, ಗೃಹಸ್ಥನದು ಇನ್ನೂ ಕೊಂಡ ಹೆಚ್ಚಿನದಾಗಿರುತ್ತದೆ. ತನ್ನ ಕುಟುಂಬದ ರಕ್ಷಣೆ, ಆಗು-ಹೋಗು, ಭವಿಷ್ಯಗಳ ಬಗ್ಗೆ ಸದಾ ಕ್ರಿಯಾಶೀಲನಾಗಿ ಬಾಳುವೆಯನ್ನು ಸಾಗಿಸಬೇಕಾಗಿರುತ್ತದೆ. ಅದೇ ಗೃಹಸ್ಥ ತಾನು ವಾಸಿಸುವ ಕೇರಿ, ಬೀದಿ, ಬಡಾವಣೆಯ ಸಾರ್ವಜನಿಕ ಜೀವನದ ಪ್ರತಿನಿಧಿಯಾದುದಾದರೆ ಆ ಜವಾಬ್ದಾರಿಯ ವ್ಯಾಪ್ತಿ ಹೆಚ್ಚಿನದಾಗುತ್ತದೆ. ಅಂತೆಯೇ ಗ್ರಾಮದ ಅಧ್ಯಕ್ಷನಾದರೆ, ತಾಲ್ಲೂಕಿನ ಮುಖಂಡನಾದರೆ, ಜಿಲ್ಲೆಯ ಮುಂದಾಳುವಾದರೆ, ಶಾಸಕನಾದರೆ, ಮಂತ್ರಿಯಾದರೆ, ಮುಖ್ಯಮಂತ್ರಿಯಾದರೆ, ಪ್ರಧಾನಮಂತ್ರಿಯಾದರೆ ಆಗಿನ ಜವಾಬ್ದಾರಿ ದೊಡ್ಡದಾಗುತ್ತದೆ. ತನ್ನ ಮುಂದೆ ಕೇವಲ ಕುಟುಂಬ ಮಾತ್ರ, ಗ್ರಾಮ, ರಾಜ್ಯ, ಪ್ರದೇಶ ಮಾತ್ರವಲ್ಲ. ಅಖಂಡ ರಾಷ್ಟ್ರದ ಬದುಕಿಗೆ ಅದರ ನಿರ್ವಹಣೆ, ಸಂರಕ್ಷಣೆ, ಸಂವರ್ಧನೆ ತನ್ನದೆಂಬ ಜವಾಬ್ದಾರಿಯ ಅರಿವಿರುತ್ತದೆ, ಇರಬೇಕಾಗುತ್ತದೆ. ಅಲ್ಲದೆ, ತಾನು ಒಂದು ಜಾತಿಯ, ಭಾಷೆಯ, ರಾಜ್ಯದ ವ್ಯಕ್ತಿಯಲ್ಲ ಸಮಸ್ತ ರಾಷ್ಟ್ರದ ಜವಾಬ್ದಾರಿ ಹೊತ್ತ ಜನಸೇವಕ, ಪ್ರಜಾಪ್ರತಿನಿಧಿ ಎಂಬ ತಿಳಿವಳಿಕೆಯಿಂದ ನಡೆದುಕೊಳ್ಳಬೇಕಾಗುತ್ತದೆ. ಎಚ್ಚರತಪ್ಪಿ ಒಂದೇ ಒಂದು ಕ್ಷಣ ವರ್ತಿಸಿದ್ದಾದರೆ, ನಡೆದುಕೊಂಡಲ್ಲಿ, ಮಾತನಾಡಿದಾಗ, ನಿರ್ಣಯ ಕೈಗೊಂಡಾಗ ಜವಾಬ್ದಾರಿಯ ಮಹತ್ವದ ಅರಿವಾಗುತ್ತದೆ. ತನ್ನ ಹಿತವಷ್ಟೇ ಮುಖ್ಯವಲ್ಲ. ರಾಷ್ಟ್ರದ ಹಿತಮುಖ್ಯ ಎಂಬ ಎಂಬ ವಿವೇಕ ಬೇಕಾಗುತ್ತದೆ. ಸ್ವಾರ್ಥ ಹಿಂದೆ ಸರಿದು, ರಾಷ್ಟ್ರ ಮುಂದೆ ಬರಬೇಕು. ಸ್ವಾರ್ಥ ಹೆಚ್ಚಾದರೆ ರಾಷ್ಟ್ರ ಸೊರಗುತ್ತದೆ. ರಾಷ್ಟ್ರದ ನೋವಿನಲ್ಲಿ ತನ್ನ ನಾಶವೂ ಇದೆ ಎಂಬುದನ್ನು ತಿಳಿದಾಗ ಮಾತ್ರ ಸ್ಥಾನದ ಮಾನ ಉಳಿಯುತ್ತದೆ. ಆದರೆ, ಇಂದು ಎಲ್ಲೆಲ್ಲೂ ಬೇಜವಾಬ್ದಾರಿಯದೇ ಜಾತ್ರೆ. ಯಾರೂ ಯಾರಿಗೂ ಯಾವುದಕ್ಕೂ ಬದ್ಧರಾಗುತ್ತಿಲ್ಲ. ಬೇಜವಾಬ್ದಾರಿಗೆ ಹೊಸ ಆಯಾಮ ನೀಡುವದಂಥೆಯಲ್ಲಿರುವುದು ಶೋಚನೀಯ. ಗೃಹಿಣಿ ಹೆತ್ತ ಮಕ್ಕಳನ್ನು ಸುಸಂಸ್ಕೃತ, ಶೀಲವಂತರನ್ನಾಗಿ ರೂಪಿಸುವಲ್ಲಿ ಜವಾಬ್ದಾರಿ ವಹಿಸುತ್ತಿರುವುದು ಕಾಣುತ್ತಿಲ್ಲ. ಅದರ ಪರಿಣಾಮವಾಗಿ ಮಕ್ಕಳು, ಯುವಜನಾಂಗ, ಅಸಂಸ್ಕೃತ, ಅನಾಗರಿಕರಾಗುತ್ತಿರುವುದು ಕಾಣುತ್ತಿದೆ. ದೇಶದ, ಆಡಳಿತದ ಚುಕ್ಕಾಣಿ ಹಿಡಿದವರು ಅಖಂಡದೃಷ್ಟಿಯುಳ್ಳವರಾಗುತ್ತಿಲ್ಲ. ಪಾಕ್ಷಿಕ ದೃಷ್ಟಿ, ಅಪರಿಪೂರ್ಣ ಚಿಂತನೆ, ಅನುಭವ ದಾರಿದ್ರ್ಯತೆ, ದೂರದರ್ಶಿತ್ವದ ಅಭಾವದಿಂದ ಸಮಸ್ಯೆಗಳಿಗೆ, ಗೊಂದಲಗಳಿಗೆ, ಕಾರಣರಾಗುತ್ತಿರುವುದು ದುರ್ದೈವ. ಜವಾಬ್ದಾರಿ ಎಂಬುದು ಧಾರ್ಮಿಕ ಅಥವಾ ಆಧ್ಯಾತ್ಮಿಕ ಪರಿಭಾಷೆಯಲ್ಲಿ ಹೇಳುವುದಾದರೆ ಅದೊಂದು 'ತಪಸ್ಸು'. ಜ್ಞಾನ-ಕ್ರಿಯೆಗಳ ಸಾಮರಸ್ಯ ಎನ್ನಬಹುದು.

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

**ಅಂಗಾಲ ಕಣ್ಣವರ ಪದವಿ ಅವರಿಗೆ ಇರಲಿ**
**ಮೇಗಾಲ ಕಣ್ಣವರ ಪದವಿ ಅವರಿಗೆ ಇರಲಿ**
**ಮೈಯೆಲ್ಲ ಕಣ್ಣವರ ಪದವಿ ಅವರಿಗೆ ಇರಲಿ**
**ಪಂಚಮುಖ ನೊಸಲಗಣ್ಣು ನಂದಿವಾಹನರಪ್ಪ**
**ಗಂಗೆತಾಳುಕ ಸಮರುದ್ರರ ಪದವಿ ಅವರಿಗೆ ಇರಲಿ**
**ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯ ಪದವಿಗಳು ಅವರಿಗೆ ಇರಲಿ.**
**ಎನಗೆ ಆವ ಫಲವೂ ಬೇಡ, ಆವ ಪದವೂ ಬೇಡ**
**ನಾನು ನಿಮ್ಮ ಪದದೊಳಗಡಗಿ**
**ಎನಗೆ ನಿನ್ನ ಭಿನವಿಲ್ಲದಿಪ್ಪ ಪರಮ ಭಕ್ತಿ ಸಂಪದವನೆ ಕೊಡಯ್ಯಾ !**
**ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ !**

ಶಿವ ಭಕ್ತಿಯಿಂದುಂಟಾದ ಸುಖಕ್ಕಿಂತ ಮತ್ತಾವುದರಿಂದುಂಟಾಗುವ ಸುಖವೂ ಹೆಚ್ಚಿನದಾಗದು. ಅಂಗಾಲ ಕಣ್ಣುಳ್ಳವರು, ತಲೆಯಮೇಲೆ ಕಣ್ಣುಳ್ಳವರು, ಮೈಯೆಲ್ಲ ಕಣ್ಣುಳ್ಳವರು, ಪಂಚಮುಖ, ಹಣೆಗಣ್ಣು, ನಂದಿವಾಹನ ಮಾಡಿಕೊಂಡವರು, ಪಡೆದ ಪದವಿಗಳೆಲ್ಲವೂ ನನಗೆ ಬೇಡ, ಸಾಲೋಕ್ಯಾದಿ ಪದವಿಗಳೂ ಕೂಡಾ ನನಗೆ ಬೇಡ. ಪರಮಾತ್ಮನೊಡನೆ ಒಂದಾಗುವ ಪರಮೋಪಾಯದ ಭಕ್ತಿ ಸಂಪತ್ತಿಗಿಂತ ಯಾವುದೂ ಹೆಚ್ಚಿನದಾಗದು. ಅದಕ್ಕಾಗಿ ನನಗೆ ನಿನ್ನಲ್ಲಿ ಒಂದಾಗುವ ಭಕ್ತಿ ಪದವಿಯನ್ನೇ ದಯಪಾಲಿಸು ಎಂದು ಪ್ರಾರ್ಥಿಸಿಕೊಳ್ಳಲಾಗಿದೆ. "ಭಕ್ತಿಃ ಕಿಂ ನ ಕರೋತ್ಯ ಹೋ ವನ ಚರೋ ಭಕ್ತಾವತಂ ಸಾಯತೇ" ಎಂಬ ಆಚಾರ್ಯರ ಉಕ್ತಿಯು ಭಕ್ತಿಯ ಘನತೆಯನ್ನು ಎತ್ತಿ ಹಿಡಿದು ತೋರಿಸುವುದಾಗಿದೆ.

(ಕೃಪೆ : ಷಟ್‌ಸ್ಥಲ ಜ್ಞಾನ ಸಾರಾಮೃತ - ಶ್ರೀ.ತೋಂ.ಸಿ.ಕೈಂ. ಸೇ. ಸಂಘ, ಎಡೆಯೂರು-ಗದಗ)

## ಉಗ್ರಾಣ - ವಿಶ್ವಕೋಶ

ಸ್ವಾಮಿಗಳ ಉಗ್ರಾಣವೊಂದು
ಸರ್ವ ಪದಾರ್ಥ ವಿಶ್ವಕೋಶ
ಇಲ್ಲಿ ಇಲ್ಲದ್ದೆ ಇಲ್ಲ.

ಹಣ್ಣುಗುಂಬಳ, ರಾಗಿ, ಜೋಳ,
ಭತ್ತ, ಅಕ್ಕಿ, ಕಾಳು ಕಡ್ಡಿ
ಸರಬರಾಜಿನ ಕಣಜ ದಿನವು ಭರ್ತಿ
ದಿನವು ಖಾಲಿ.

ಸಮುದ್ರದ ಹಾಗೆ
ಬರುವುದೂ ಗೊತ್ತಾಗದೆ
ಹೋಗುವುದೂ ಗೊತ್ತಾಗದೆ
ನಿತ್ಯ ನಿರಂತರ ಕ್ರಿಯಾವರ್ತಿ....

ಬಡವ ಸಿರಿವಂತ ಕುಲಭೇದವಿಲ್ಲದೆ
ಎಲ್ಲರೂ ತಂತಂದು ಸುರಿವರವರವರ
ಚೈತನ್ಯ ಖುದ್ದಿ

ಇದರ ಸದ್ವಿನಿಯೋಗವೊಂದು ಯೋಗಾಯೋಗ
ಮಠದ ಬಡ ಮಕ್ಕಳಿಗೆ
ಚಿರಮಭಿವರ್ಧತಾಂ ಪರಿಪರಿ
ಜ್ಞಾನ ದಾಸೋಹ ಸಿರಿ.

## ಸ್ತುತ್ಯ ಗುರು

ತಾಯಿ ತಂದೆ ಕೈ ಬಿಟ್ಟ
ಕುಮಾರಿಯೋರ್ವಳು
ನಿಮ್ಮ ಮೊರೆ ಹೊಕ್ಕಾಗ

ನೀವೇ ತಂದೆ ತಾಯಿ
ಬಂಧು ಬಳಗ ಆಗಿ
ತಕ್ಕವರನ ಅರಸಿ
ಮದುವೆ ಮಾಡಿದ್ದ ಕೇಳಿ
ಸಂತಸವಾಯ್ತು.

ಬಸವಾದಿ ಪ್ರಮಥರು
ಅಕ್ಕನ ಚೆನ್ನಮಲ್ಲಿಕಾರ್ಜುನಗೆ
ಎರೆದು ಕೊಟ್ಟ ನೆನಪಾಯ್ತು
ಸ್ತುತ್ಯ ಗುರುವೆ!

- ವೀಚಿ





# ನಾನು ಕಂಡೊಂದು ಬೆರಗು

- ಡಾ. ಶಿವರಾಮ ಕಾರಂತ

ಬೆರಗಿನ ಈಯೊಂದು ಮಾತನ್ನು ನಾನೇಕೆ ಹೇಳುತ್ತಿದ್ದೇನೆ ಎಂದು - ಹಲವು ಹಿರಿಯರಿಗೆ ಆಶ್ಚರ್ಯವಾದೀತು. ಹಾಗಾಗುವುದು ಸಹಜವೇ. ನನ್ನ ಸ್ಮರಣೆಯ ಕಾಲ ೧೯೨೪ರಷ್ಟು ಹಿಂದಿನದು. ಇದೇ ವಿಷಯಕ್ಕೆ ಸಂಬಂಧಿಸಿದ್ದು, ಆಗ ನಾನು ನಮ್ಮ ಜಿಲ್ಲೆಯ, 'ಅಂಬಾ ಪ್ರಾಸಾದಿಕ' ನಾಟಕ ಮಂಡಲಿಯವರ ಜೊತೆಗೆ ತುಮಕೂರಿಗೆ ಬಂದೆ. ಅವರಿಗೆ ಎರಡು ನಾಟಕಗಳನ್ನು ಬರೆದುಕೊಟ್ಟು ತಾಲೀಮು ಮಾಡಿಸಿದ ಸಮಯ ಅದು. ಆ ನಾಟಕ ಮಂಡಲದವರು ತಮ್ಮ ನಾಟಕಗಳನ್ನು ಇಲ್ಲಿ ಪ್ರದರ್ಶಿಸುತ್ತಿದ್ದರು. ನಾನು ಅವರ ತಾಲೀಮು ಮಾಸ್ತರ. ಆ ನೆಪದಿಂದ ಈ ಊರಲ್ಲಿ ಎರಡು ಮೂರು ತಿಂಗಳ ಕಾಲ ವಾಸಿಸಿದ್ದುಂಟು. ಆಗ ನಾನು ವಸಂತ ಎಂಬ ಒಂದು ಮಾಸಪತ್ರಿಕೆಯನ್ನು ನಡೆಸುತ್ತಿದ್ದೆ. ಅದಕ್ಕೆ ಇದೇ ಊರಿನ ನಾಲ್ವರು ಪ್ರಬುದ್ಧರು ಚಂದಾದಾರರಾಗಿದ್ದರು. ರಾಮರಾಯರು, ಸೆಟ್ಲೂರರವರು, ರಂಗ ಐಯ್ಯಂಗಾರರು, ಹೆಸರು ಮರೆತ ಮತ್ತೊಬ್ಬರು. ಅದರಿಂದ ನನ್ನ ಪಾಲಿನ ಪ್ರತಿಷ್ಠೆಯೂ ಒಂದಿಷ್ಟು ಸೇರಿತ್ತು.

ಆಗ ತುಮಕೂರಿಲ್ಲಿ ಮೂರು ನಾಲ್ಕು ತಿಂಗಳ ಕಾಲ ಇಲ್ಲಿದ್ದುದರಿಂದ ಅಂದಿನ ನನ್ನ ಮನೋಧರ್ಮಕ್ಕೆ ಒಪ್ಪುವ ಒಂದು ನಾಟಕವನ್ನು ಬರೆದೆ. ಆ ನಾಟಕ ತಮಿಳುನಾಡಿನ ಸಂತ ನಂದನಾರ್‌ನ ಕಥೆ. ಅದನ್ನು ಬರೆದು ಮುಗಿಸಿದ್ದೆಲ್ಲಿ ಎಂದು ಹೇಳಲಿ! ಕುಣಿಗಲ್ಲಿಗೆ ಇಲ್ಲಿಂದ ಕವಲೊಡೆದ ದಾರಿಯ ಮಗ್ಗುಲಲ್ಲಿದ್ದ ಶ್ಮಶಾನದಲ್ಲಿ - ವಿರಮಿಸಿ!

ಪತ್ರಕರ್ತನಾದ ನನಗೆ ಈ ಊರಿನ ನಾಲ್ಕು ಮಂದಿ ವಕೀಲ ಮಿತ್ರರೂ ದೊರಕಿದ್ದರು. ಅಲ್ಲಿದ್ದ ನನಗೆ - ಒಂದು ದಿನ ಆ ಊರಿಗೆ ನೀರನ್ನು ಒದಗಿಸುವ 'ಕ್ಯಾತಸಂದ್ರ' ಕೆರೆಯನ್ನು ನೋಡಿ ಬರುವ ಕುತೂಹಲ ಮೂಡಿತ್ತು. ಈ ಕ್ಯಾತಸಂದ್ರ ಮುಂದೆ ವಿಖ್ಯಾತ ಕ್ಷೇತ್ರವೂ ಆಯಿತು. ಕ್ಯಾತಸಂದ್ರ ಊರಿನಲ್ಲಿ ಅಲೆದಾಡುತ್ತಿದ್ದ ನನಗೆ - ಇಲ್ಲಿನ 'ತೋತಾಪುರಿ' ಮಾವಿನಕಾಯಿ ಹಸಿವು ತಣಿಸಿದ್ದುಂಟು.

ಆ ಊರಿನ ವಿಶೇಷವೇನೆಂದು ಅಂದು ನನ್ನನ್ನು ಕೇಳಿದ್ದರೆ - ಅದು ದೆವ್ವ ಗಾತ್ರದ ಹೆಬ್ಬಂಡೆಗಳ ರಾಶಿಯಂತೆ ಕಾಣಿಸುತ್ತಿದ್ದ ಗುಡ್ಡಗಳು. ಅವುಗಳ ನಡುವೆ ಮಳೆನೀರು ಕಲೆತು ಉಂಟಾದ ಒಂದು ಕೆರೆ - ತುಮಕೂರಿಗೂ ನೀರು ಉಣಿಸುವ ಕೆರೆ. ಅದರ ಮಗ್ಗುಲಲ್ಲಿ ಒಂದು ವೀರಶೈವ ಸ್ವಾಮಿಗಳ ಮಠ ಇದೆ. ಆ ಮಠದ ಡಾ|| ಶಿವಕುಮಾರ ಸ್ವಾಮಿಯವರು ಒಬ್ಬ ಮಾಂತ್ರಿಕರಂತೆ - ಆ ಕ್ಷೇತ್ರಕ್ಕೆ ಪ್ರಸಿದ್ಧಿ ತರಿಸಿದರು - ತಾವು ತೊಡಗಿಸಿದ ವಿದ್ಯಾಸಂಸ್ಥೆಗಳಿಂದ ಅವು ಬೆಳೆಬೆಳೆದು ಈ ಪ್ರದೇಶದ ಕೀರ್ತಿಯನ್ನು ಹೆಚ್ಚಿಸಿದ ಸಂಸ್ಥೆಗಳು. ಆಗ ಈ ಊರು ಈ ಮಠದಿಂದಾಗಿ ಸಿದ್ಧಗಂಗಾ ಕ್ಷೇತ್ರ ಎನಿಸಿತ್ತು. ಇಲ್ಲಿ ತನ್ನ ವಿದ್ಯಾಸಂಸ್ಥೆಗಳಿಂದ, ಅನ್ನಸತ್ರದಿಂದ ಕೆಲವೇ ದಶಕಗಳಲ್ಲಿ ಇದು ಗಳಿಸಿದ ಕೀರ್ತಿ ಅಸಾಮನ್ಯ. ಕರ್ನಾಟಕ ಸರಕಾರ ಹಿಂದುಸ್ಥಾನ ವಾಚ್ ವರ್ಕ್ಸ್‌ನ ಒಂದು ಕಾರ್ಖಾನೆಯನ್ನು ತುಮಕೂರಿಗೆ ತಂದು ಸಿದ್ಧಗಂಗೆಯನ್ನು ಆವರಿಸಿತು.

ಇಲ್ಲಿನ ಈ ಬಗೆಯ ವಿದ್ಯಾ ವಿಸ್ತಾರದ ಕೆಲಸ ಅಚ್ಚರಿ ತರುವಂಥದು. ಸಿರಿಗೆರೆ, ಸುತ್ತೂರು, ಚಿತ್ರದುರ್ಗ, ಹುಬ್ಬಳ್ಳಿ ಮೊದಲಾದ ನಗರಗಳಲ್ಲಿ - ಅಲ್ಲಲ್ಲಿನ ವೀರಶೈವ ಮಠಗಳು - ಅನ್ನದಾನದ ಪ್ರಸಿದ್ಧಿಗಿಂತ ಅಧಿಕವಾದ ವಿದ್ಯಾದಾನದ ಪ್ರಸಿದ್ಧಿಗೂ ಕಾರಣರಾದುವು. ಇವತ್ತಿನ ನನ್ನ ಪಾಲಿನ ಬೆರಗಿಗೆ ಕಾರಣವಾದ ವಿದ್ಯಮಾನ ಅಂಥ ಒಂದು ಅಸಾಮಾನ್ಯ ಸಾಹಸ!

೧೯೨೪ರಲ್ಲಿ ನೀರಿನ ಕೆರೆ ಕಾಣಲು ಹೋದದ್ದು ಕುತೂಹಲದಿಂದ. ಅಲ್ಲಿನ ಸ್ವಾಮಿಯವರು - ವಿವಿಧ ಸ್ವರೂಪದ ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿದರು. ಅಂಥ ಒಂದೆರಡು ಸಂಸ್ಥೆಗಳ - ವಾರ್ಷಿಕೋತ್ಸವಕ್ಕೂ ನಾನು ಹೋಗಿ ಭಾಗವಹಿಸಿದ್ದೆ. ಇಂದು - ವಿದ್ಯಾಸಂಸ್ಥೆಗಳ ಜತೆಗೆ ಅವುಗಳ ಸ್ಥಾಪಕರೂ ಅನ್ನದಾನಿಗಳಾಗಿಯೂ ಔದಾರ್ಯ ಮೆರೆಸಿದರು.

ಹಾಗಾಗಿ ಒಂದು ದಿನ ಸಿದ್ಧಗಂಗಾಮಠದ ಶ್ರೀ ಶಿವಕುಮಾರ ಸ್ವಾಮಿಗಳೂ ನನ್ನನ್ನು ತಮ್ಮ ಊರಿಗೆ ಬರಮಾಡಿಕೊಂಡರು. ಈ ಬಾರಿ ಮಾತ್ರ - ಎಲ್ಲರಂತಲ್ಲ ಇಲ್ಲಿನವರು ಎಂಬ ಎಚ್ಚರ ಹುಟ್ಟಿಸಿದರು. ಈ ಬಾರಿ ನಾನು ಡಾ|| ಮೋದಿಯವರು, ನನ್ನೊಬ್ಬ ಅಭಿಮಾನಿ ಎಂ. ಮಲ್ಲಿಕಾರ್ಜುನಯ್ಯನವರ ಜತೆಗೆ ಹೋಗಿದ್ದೆ, ಅಲ್ಲಿ ಡಾ|| ಶಿವಕುಮಾರಸ್ವಾಮೀಜಿಯವರ ಆರುವತ್ತನೇ ಜನ್ಮದಿನದ ಒಂದು ಹಿರಿಯ ಕನಸನ್ನು ಹೊತ್ತ

ಕತೆ ಕೇಳಿದ್ದೆ. ಆ ಉತ್ಸವ ಮುಂದೆ ನಡೆದೇ ನಡೆಯಿತು. ನನಗೆ ಆಮಂತ್ರಣವೂ ಇತ್ತು. ಬೇರೆ ಒಂದೆರಡು ಕರೆಗಳು ನನ್ನನ್ನು ಇಲ್ಲಿಗೆ ಬರಗೊಡಿಸಲಿಲ್ಲ. ಬಾರದೆ ಹೋದನೇ, ಎಂಬ ಕೊರಗನ್ನು ಮೂಡಿಸಿದ - ಒಂದು ಸ್ಮಾರಕ ಇಲ್ಲಿ ಸ್ಥಾಪನೆಗೊಂಡುದು. ನಾಲ್ಕು ಸಾವಿರದಷ್ಟು ವಿದ್ಯಾರ್ಥಿಗಳಿಗೆ ನೆರಳು, ಅನ್ನ, ತಿಳಿವು ನೀಡುವ ಒಂದು ಅದ್ಭುತ ಸೌಧವನ್ನು ಕಂಡೆ. ಇದಾದರೆ ಬೆರಗಿನಲ್ಲಿ ಬೆರಗು ಬೆರಸಿದ ಕೃತಿ! ಇದರ ವೈಶಿಷ್ಟ್ಯಕ್ಕೆ ಸಮನಾದ ಮತ್ತೊಂದು ದೃಶ್ಯವೂ ಕಾದಿತ್ತು. ಸ್ವಾಮೀಜಿಯವರ ಮುಂಗಡೆ ಕಾವಿಯುಡುಗೆಯ ನಾಲ್ಕು ಸಾವಿರ ವಿದ್ಯಾರ್ಥಿಗಳು ಕುಳಿತ ಒಂದು ಆಕರ್ಷಕ ದೃಶ್ಯ!

೧೯೩೪ರಲ್ಲಿ ನಾವು ಸಂಧಿಸಿದ ಹೆಬ್ಬಂಡೆಗಳ ದುರ್ಗಮ ಸೀಮೆಯಲ್ಲಿ ಇಂಥೊಂದು ದಿವ್ಯ ಸ್ಮಾರಕ ಕಾಣಿಸೀತೇ! ಇದೊಂದು ಸದಾಶಯಗಳಿಗೆ ರೂಪುಗೊಟ್ಟ ಸಾರ್ಥಕ ಸ್ಮಾರಕ.

(ಕೃಪೆ : ತೊಂಬತ್ತರ ತಪಸ್ಸಿ)







## ಅಖಿಲ ಭಾರತ ಐದನೆಯ ಶರಣ ಸಾಹಿತ್ಯ ಸಮ್ಮೇಳನಾಧ್ಯಕ್ಷೆ

# ಶ್ರೀಮತಿ ಶಾಂತಾದೇವಿ ಮಾಳವಾಡ

ಶ್ರೀಮತಿ ಮಾಳವಾಡರು ಭಾರತೀಯ ಪರಂಪರಾಗತ ಮಹಿಳೆ. ಆದರೆ ಆಧುನಿಕತೆಗೆ ಹೊಂದಿಕೊಳ್ಳಲಾರದಷ್ಟು ಸಂಪ್ರದಾಯಸ್ಥರಲ್ಲ. ಆಧುನಿಕ ಮಹಿಳೆಯರಲ್ಲಿ ಕಂಡುಬರುವ ಶಾಲೀನತೆಯ ಅಭಾವವೂ ಅವರಿಗೆ ಸೇರುವುದಿಲ್ಲ. ಸಂಪ್ರದಾಯ-ಆಧುನಿಕತೆಗಳ ಸುಂದರ ಸಂಗಮ..." ಶಾಂತಾದೇವಿ ಮಾಳವಾಡರನ್ನು ಕುರಿತು ಕರ್ನಾಟಕ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಕೊರಿಯಾ ಅಫಾನ್ಸೋ ಅವರು ತಮ್ಮ



ಮನೆಯ ಸಂತೋಷಕೂಟದ ಪರಿಚಯಾತ್ಮಕ ಸಂಭಾಷಣೆಯಲ್ಲಿ ಅಂದಿನ ಮುಂಬಯಿ ರಾಜ್ಯದ ಶ್ರೇಷ್ಠ ನ್ಯಾಯಾಧೀಶ ದಂಪತಿಗಳಿಗೆ ಹೇಳಿದ ಮಾತುಗಳಿವು. ಈ ಮಾತುಗಳಿಂದ ಶಾಂತಾದೇವಿಯವರ ವ್ಯಕ್ತಿತ್ವ, ದೃಷ್ಟಿಕೋನಗಳ ಬಗೆಗೆ ಆದರ ಮೂಡುತ್ತದೆ. ಶಾಂತಿ, ಸಹನೆಗಳ ಸಾಕಾರಮೂರ್ತಿಯಾಗಿ ಬದುಕಿನಲ್ಲಿ ಮಾನವೀಯ ಕರುಣೆ, ಪ್ರೇಮಗಳನ್ನು ಹೊನಲಾಗಿ ಹರಿಸಿದ ಗುಣ ಸಂಪನ್ನೆ ಶಾಂತಾದೇವಿ ಮಾಳವಾಡರು ಎಲ್ಲರ ಅಚ್ಚುಮೆಚ್ಚಿನ 'ಶಾಂತಕ್ಕ' ಆಗಿರುವರು. ಕಿತ್ತೂರು ಕರ್ನಾಟಕ ಸಾಂಸ್ಕೃತಿಕ ಬದುಕಿಗೆ ವಿಶಿಷ್ಟ ಮಾದರಿಯಾಗಿರುವರು.

೧೦.೧೨.೧೯೨೨ರಲ್ಲಿ ಬೆಳಗಾವಿಯಲ್ಲಿ ಜನಿಸಿದ ಶಾಂತಕ್ಕ ದುರ್ದೈವದಿಂದ ತಮ್ಮ ಬಾಲ್ಯದಲ್ಲಿಯೇ ತಮ್ಮ ತಂದೆ-ತಾಯಿಯನ್ನು ಕಳೆದುಕೊಂಡರು. ಅಜ್ಜಿಯ ಆಸರೆಯಲ್ಲಿ ಬೆಳೆದ ಅವರು ಕಲಿಯತೊಡಗಿದ್ದರಾದರೂ ಎರಡನೆಯ ತರಗತಿಗೆ ಬಂದಾಗ ಸಂಪ್ರದಾಯಸ್ಥ ಮನೆಯ ವಾತಾವರಣದಿಂದ ವಿದ್ಯಾಭ್ಯಾಸ ಮುಂದುವರೆಯಲಿಲ್ಲ. ೧೯೩೭ರಲ್ಲಿ ಪ್ರೊ. ಸ.ಸ. ಮಾಳವಾಡರ ಧರ್ಮಪತ್ನಿಯಾಗಿ ಧಾರವಾಡಕ್ಕೆ ಬಂದ ಮೇಲೆ ಶಾಂತಕ್ಕ ಅವರ ಬಾಳಿನಲ್ಲಿ ಅರಿವಿನ ಹೊಸ ಬೆಳಗು ಮೂಡಿತು. ಔಪಚಾರಿಕ ವಿದ್ಯೆಯಿಂದ ವಂಚಿತರಾದರೂ, ಧೃತಿಗೆಡದೆ ಸ್ವಂತ ಸಾಮರ್ಥ್ಯದಿಂದ ಸಾಹಿತ್ಯಾಭಿರುಚಿ, ವ್ಯಾಸಂಗ ಬೆಳೆಸಿಕೊಂಡರು. ಪ್ರೊ. ಮಾಳವಾಡರ ಸಹಕಾರ ಮಾರ್ಗದರ್ಶನದಿಂದ ಕತೆಗಾರ್ತಿ, ಕಾದಂಬರಿಗಾರ್ತಿ, ವೈಚಾರಿಕ ಲೇಖಕಿಯಾಗುವಷ್ಟು ಬೆಳೆದು ಉತ್ತಮ ಕೃತಿಗಳನ್ನು ರಚನೆ ಮಾಡಿ ಸಾಹಿತ್ಯ ಕ್ಷೇತ್ರದಲ್ಲಿ ವಿಶಿಷ್ಟ ಸ್ಥಾನ ಪಡೆದರು. ೧೯೬೮ರಲ್ಲಿ 'ಮೊಗ್ಗೆಯ ಮಾಲೆ' ಕಥಾ ಸಂಕಲನ ಮೂಲಕ ಸಾಹಿತ್ಯ ಕ್ಷೇತ್ರಕ್ಕೆ ಕಾಲಿರಿಸಿದ ಶಾಂತಕ್ಕ ಬೆಳವಡಿ ಮಲ್ಲಮ್ಮ, ಬಸವಯುಗದ ಶಿವಶರಣೆಯರು, ದಾನ ದಾಸೋಹಿ ದಾನಮ್ಮ, ಮಹಿಳಾ ಚೇತನ, ಸಾಮಾಜಿಕ ರಂಗದಲ್ಲಿ ಮಹಿಳೆ, ಶ್ರೀಗಿರಿಯಿಂದ ಹಿಮಗಿರಿಗೆ, ಶೂರರಾಣಿ ಕೆಳದಿ ಚೆನ್ನಮ್ಮಾಜಿ ಬೃಹತ್ ಕಾದಂಬರಿ - ಹೀಗೆ ಸುಮಾರು ೪೦ ಕೃತಿಗಳನ್ನು ರಚಿಸಿದ್ದಾರೆ. ಅವರ ಸಾಹಿತ್ಯ ಬಹು ಹುಲುಸಾಗಿರುವುದರ ಜೊತೆಗೆ ವೈವಿಧ್ಯಪೂರ್ಣವಾಗಿದೆ. ರುಚಿ ರುಚಿಯಾದ ಅಡುಗೆಯಿಂದ ಹಿಡಿದು ಆರೋಗ್ಯ, ಗೃಹಾಲಂಕರಣ, ಲಲಿತಕಲೆ, ಮಹಿಳೆಯರ ಸೌಂದರ್ಯ ಪೋಷಣೆ ಮುಂತಾದ ಅಗತ್ಯ ವಿಷಯಗಳ ಮಾಹಿತಿಯೊಂದಿಗೆ ಸಂಶೋಧನೆ, ಸಣ್ಣ ಕತೆ, ಕಾದಂಬರಿ, ಜೀವನಚರಿತ್ರೆ, ನಾಟಕ, ಪ್ರವಾಸ, ಅನುವಾದ, ಆಧ್ಯಾತ್ಮ ಚಿಂತನೆ, ಮಕ್ಕಳ ಸಾಹಿತ್ಯದವರೆಗಿನ ಎಲ್ಲ ಪ್ರಕಾರಗಳಲ್ಲಿ ತಮ್ಮ ಲೇಖನಿಯನ್ನು ದುಡಿಸಿದ್ದಾರೆ.

ಶಾಂತಾದೇವಿ ಅವರ ಸಾಮಾಜಿಕ ಚಟುವಟಿಕೆಗಳು ಹಲವು ವಿಧ. ಮಹಿಳಾ ಪ್ರಪಂಚ ಕುರಿತು ಕಳಕಳಿ, ಸಮಾಜ

ಸಂಸ್ಕೃತಿಗಳಲ್ಲಿ ಮಹಿಳೆಯರ ಸ್ಥಾನಮಾನ ಮುಂತಾದ ಹಲವಾರು ವಿಷಯಗಳ ಬಗೆಗೆ ಚಿಂತನೆ ಮಾಡಿ ತಮ್ಮ ವ್ಯಕ್ತಿತ್ವವನ್ನು ವಿಶಾಲವಾಗಿಸಿಕೊಂಡದ್ದಲ್ಲದೇ ಸ್ತ್ರೀ ಜಾಗೃತಿಯ ಚಟುವಟಿಕೆಗಳನ್ನು ಕೈಗೆತ್ತಿಕೊಂಡರು. ಅನೇಕ ಸಂಘ-ಸಂಸ್ಥೆ ಪರಿಷತ್ತು, ಸಮ್ಮೇಳನಗಳಲ್ಲಿ ಭಾಗವಹಿಸಿ, ಸದಸ್ಯೆ, ಕಾರ್ಯದರ್ಶಿನಿ, ಉಪಾಧ್ಯಕ್ಷೆ, ಅಧ್ಯಕ್ಷೆಯ ಸ್ಥಾನವನ್ನಲಂಕರಿಸಿ ಮಹಿಳಾ ಪ್ರಪಂಚಕ್ಕೆ ಒಂದು ವಿಶೇಷ ಕಳೆ ತಂದುಕೊಟ್ಟರು. ಸಾಮಾಜಿಕ ಅಭಿವೃದ್ಧಿ, ಸಾಮಾಜಿಕ ಶಿಕ್ಷಣ, ರಾಷ್ಟ್ರೀಯ ಉಳಿತಾಯ, ಮಕ್ಕಳ ನ್ಯಾಯಾಲಯ, ಮಕ್ಕಳ ಕಲ್ಯಾಣ, ಮಹಿಳಾ ಪರಿಷತ್ತು ಹೀಗೆ ಅವರು ಆಸ್ಥೆ ವಹಿಸದೇ ಇರುವ ಸಾಮಾಜಿಕ ಕ್ಷೇತ್ರ ವಿರಳವೆಂದೇ ಹೇಳಬಹುದು. ಅವರು ಕಟ್ಟಿ ಬೆಳೆಸಿದ ಅಕ್ಕನ ಬಳಗಗಳು, ಮಹಿಳಾ ಮಂಡಳಿಗಳು ಸ್ತ್ರೀಯರ ಜಾಗೃತಿ ಕೇಂದ್ರಗಳಾಗಿವೆ.

ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ, ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಸದಸ್ಯತ್ವ, ಕರ್ನಾಟಕ ರಾಜ್ಯ ಸರ್ಕಾರದ ಅತ್ತಿಮಬ್ಬೆ ಪ್ರಶಸ್ತಿ, ಸ್ವರಲಿಪಿ ಪ್ರತಿಷ್ಠಾನದ 'ಚಂದ್ರಕಲಾ ಪ್ರಶಸ್ತಿ', 'ಲಿಪಿ-ಪ್ರಾಜ್ಞೆ' ಬಿರುದು ಇವೇ ಮೊದಲಾಗಿ ಶಾಂತಕ್ಕ ಅವರಿಗೆ ಹಲವು ಗೌರವ ಪ್ರಶಸ್ತಿಗಳು ಸಂದಿವೆ. ಕೇಂದ್ರ ಸಾಹಿತ್ಯ ಅಕಾಡೆಮಿ ಸದಸ್ಯರಾಗಿ ಕಾರ್ಯ ನಿರ್ವಹಿಸಿದ್ದಾರೆ. ಶಾಂತಕ್ಕ ಅವರ ೬೦ನೆಯ ಹುಟ್ಟುಹಬ್ಬದ ಸಮಾರಂಭದಲ್ಲಿ ಅಭಿನಂದನ ಗ್ರಂಥ 'ಪ್ರಶಾಂತ' ಪ್ರಕಟವಾಗಿದೆ. ಕನ್ನಡ ಸಾಹಿತ್ಯ ಪರಿಷತ್ತು ಗೌರವ ಸದಸ್ಯತ್ವ ನೀಡಿದಾಗ 'ಶಾಂತಕಿರಣ' ವಾಚಿಕೆ ತಂದಿದೆ. ಪರಿಷತ್ತಿನಲ್ಲಿ 'ಶಾಂತಾದೇವಿ ಮಾಳವಾಡ' ದತ್ತಿ ನಿಧಿ ಸ್ಥಾಪಿತವಾಗಿದೆ. ಕರ್ನಾಟಕ ಸರ್ಕಾರದ ಪ್ರತಿಷ್ಠಿತ ಅತ್ತಿಮಬ್ಬೆ ಪ್ರಶಸ್ತಿಯನ್ನು ಪಡೆದ ಹಿರಿಮೆ ಶಾಂತಾದೇವಿ ಅವರದು.

ಬದುಕು ಬರಹಗಳ ಅನನ್ಯತೆಯಿಂದ ಆದರ್ಶವಾಗಿರುವ ಮತ್ತು ಶರಣ ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿರುವ ಶ್ರೀಮತಿ ಶಾಂತಾದೇವಿ ಮಾಳವಾಡ ಅವರನ್ನು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಗೌರವ ಸದಸ್ಯತ್ವ ನೀಡಿ ಗೌರವಿಸಿದೆ. ಶ್ರೀಮತಿ ಶಾಂತಾದೇವಿ ಮಾಳವಾಡ ಅವರಿಗೆ 'ಮಹಾಮನೆ' ಹಾರ್ದಿಕ ಅಭಿನಂದನೆಗಳನ್ನು ಸೂಚಿಸುತ್ತದೆ.

(ಕೃಪೆ : 'ಮಹಾಮನೆ') ☐

**ಮನೆಮದ್ದು**

## ಜಾಜಿ ಗಿಡ

ಬಳ್ಳಿಯ ರೂಪದಲ್ಲಿ ಮನೆಯಂಗಳದಲ್ಲಿ ಬೆಳೆಯುವ ಜಾಜಿ ಅಥವಾ ಜಾಜ ಮಲ್ಲಿಗೆ ಸುಂದರವಾದ ಸುವಾಸನಾ ಭರಿತ ಹೂಗಳಿಂದ ಚಿರಪರಿಚಿತವಾಗಿದೆ. ಕಾಂಡವನ್ನು ಮರಳು ಮಿಶ್ರಿತ ಮಣ್ಣಿನಲ್ಲಿ, ನೀರಿನಾಸರೆ ಇರುವ ಜಾಗದಲ್ಲಿ ನೆಟ್ಟರೆ ಬಹುಬೇಗ ಬೆಳೆಯುತ್ತದೆ. ನೆಟ್ಟ ನಾಲ್ಕು ತಿಂಗಳಲ್ಲಿ ಬಳಸಲು ಯೋಗ್ಯವಾದ ಎಲೆಗಳು ದೊರೆಯುತ್ತವೆ.

ಜಾಜಿ ಗಿಡದ ಹೂ, ಎಲೆ ಮತ್ತು ಬೇರು ಅತ್ಯುತ್ತಮ ಔಷಧ ದ್ರವ್ಯಗಳು, ಹಲ್ಲುನೋವು, ಬಾಯಿ ಹುಣ್ಣು ಆಣಿ, ಸೋರುವ ಕಿವಿ, ಗಾಯದಿಂದ ಸಣ್ಣ ರಕ್ತಸ್ರಾವ ಮತ್ತು ಚರ್ಮ ರೋಗಗಳಲ್ಲಿ ಜಾಜಿ ಬಹು ಉಪಯೋಗಿ.

- ಜಾಜಿಯ ಗಿಡದ ಎಲೆಯನ್ನು ಸ್ವಚ್ಛವಾಗಿ ತೊಳೆದು ಬಾಯಲ್ಲಿಟ್ಟು ಜಗಿಯುವುದರಿಂದ ಸಾಮಾನ್ಯ ಗಾಯಗಳಿಂದಾದ ರಕ್ತಸ್ರಾವ ನಿಲ್ಲುತ್ತದೆ. ಜಾಜಿ ಎಲೆಯ ರಸವನ್ನು ಹಾಕುವುದರಿಂದಲೂ ಸಣ್ಣ ರಕ್ತಸ್ರಾವವನ್ನು ನಿಲ್ಲಿಸಬಹುದು. ಗಾಯ ಕೂಡ ಬೇಗ ಮಾಯುತ್ತದೆ.
- ಕಾಲಿನ ಬೆರಳುಗಳ ಸಂದಿಗಳಲ್ಲಿ ಕಂಡು ಬರುವ ಆಣಿಗಳು ಮತ್ತು ಕೆಸರು ಹುಣ್ಣಿಗೆ ದಿನಕ್ಕೆ ಮೂರರಿಂದ ನಾಲ್ಕು ಬಾರಿಯಂತೆ ಜಾಜಿ ಸೊಪ್ಪಿನ ರಸವನ್ನು ಹಚ್ಚುವುದರಿಂದ ಆ ತೊಂದರೆ ವಾಸಿಯಾಗುತ್ತದೆ.
- ನಾಲ್ಕು ಭಾಗ ಜಾಜಿ ಸೊಪ್ಪಿನ ರಸಕ್ಕೆ ಒಂದು ಭಾಗ ಎಳ್ಳೆಣ್ಣೆ ಬೆರೆಸಿ ಇಪ್ಪತ್ತನೇ ಒಂದಂಶದಷ್ಟು ಅರಿಶಿನ ಪುಡಿ ಸೇರಿಸಬೇಕು. ಇದನ್ನು ನಿಧಾನವಾಗಿ ಕುದಿಸಿ ನೀರು ಇಂಗಿಸಬೇಕು. ಶೋಧಿಸಿ, ಸಂಗ್ರಹಿಸಿದ ಈ ಎಣ್ಣೆಯನ್ನು ಬಿದ್ದ, ಸುಟ್ಟ ರಕ್ತ ಬರುವ ಗಾಯಗಳಿಗೆ ಹಚ್ಚುವುದರಿಂದ ಕೂಡಲೇ ರಕ್ತಸ್ರಾವವನ್ನು ನಿಲ್ಲಿಸಬಹುದು. ಉರಿ ನೋವುಗಳನ್ನು ಕಡಿಮೆ ಮಾಡಬಹುದು. ಗಾಯವೂ ಬೇಗ ವಾಸಿಯಾಗುತ್ತದೆ.





# ಶಿಕ್ಷಣದ ಉದ್ದೇಶಗಳು, ಸಾಧನೋಪಾಯಗಳು

- ಪ್ರೊ. ಎಸ್. ಆರ್. ರೋಹಿಡೇಕರ್
ನಿರ್ದೇಶಕರು (ನಿವೃತ್ತ),
೬೬, ೧ನೇ ಕ್ರಾಸ್, ಪದ್ಮನಾಭನಗರ, ಬೆಂಗಳೂರು-೫೬೦ ೦೭೦

ಭಾರತದ ಭವಿತವ್ಯವು ನಮ್ಮ ಶಾಲಾ-ಕಾಲೇಜುಗಳ ವರ್ಗ-ಕೋಣೆಗಳಲ್ಲಿ ರೂಪಿತವಾಗುತ್ತಿದೆ" ಎಂಬ ಸ್ಫೂರ್ತಿದಾಯಕ ವಾಕ್ಯದಿಂದ ಕೊಠಾರಿ ಕಮಿಶನ್ ವರದಿ ಪ್ರಾರಂಭವಾಗುತ್ತದೆ. ಅವರು ಹೇಳಿದ್ದು ೧೯೬೬ರಲ್ಲಿ. ಕಳೆದ ೩೩ ವರ್ಷಗಳಿಂದ ನಡೆದು ಬಂದ ಶಿಕ್ಷಣ ಎಂತಹ ಭೀಕರ ಭವಿತವ್ಯವನ್ನು ರೂಪಿಸಿದೆ ಎಂದು ತಿಳಿಯಲು ಸಂಶೋಧನೆ ಬೇಕಾಗಿಲ್ಲ. ಸಂಸತ್ತಿನಲ್ಲಿ ನಮ್ಮ ಪ್ರಜಾಸತ್ತಾತ್ಮಕ ಪ್ರತಿನಿಧಿಗಳು ಪ್ರದರ್ಶಿಸಿದ, ದೇಶ ತಲೆತಗ್ಗಿಸಬೇಕಾದ ನಡವಳಿಕೆ, ಅಧಿಕಾರಿಗಳ ದರ್ಪ, ನಿರ್ಲಕ್ಷ್ಯ, ಪೋಲೀಸರ ದೌರ್ಜನ್ಯ, ಬೆತ್ತಲೆ ತಾಂಡವವಾಡುತ್ತಿರುವ ಸರ್ವಾಂತರ್ಯಾಮಿ ಭ್ರಷ್ಟಾಚಾರ, ಹಾಡು ಹಗಲೇ ನಡೆಯುತ್ತಿರುವ ಕೊಲೆ, ಸುಲಿಗೆ, ರೇಪು ರಂಪಾಟಗಳು, ಬ್ರಿಟಿಷರ ಆಳ್ವಿಕೆಯಲ್ಲಿ ಇದ್ದುದಕ್ಕಿಂತಲೂ ಸಹಸ್ರಾರುಪಟ್ಟು, ಹೆಚ್ಚಿವೆ. ಎಲ್ಲ ಕ್ಷೇತ್ರಗಳಲ್ಲೂ ಬದುಕಿನ ಮೌಲ್ಯಗಳ ಅಧಃಪತನವಾಗುತ್ತಿದೆ. ಬೃಹದಾಕಾರದ ಜನಸಂಖ್ಯಾ ಬೆಳವಣಿಗೆಯಿಂದ ಉಂಟಾದ ನಿರುದ್ಯೋಗಿಗಳ ಸಂಖ್ಯಾಏರಿಕೆ ಒಂದೆಡೆ, ಸುಶಿಕ್ಷಿತ ಉದ್ಯೋಗಿಗಳಲ್ಲಿ ಸಾರ್ವಕಾಲಿಕ, ಸರ್ವಸ್ಥಾನಿಕ ಮೂಲಭೂತ ಮೌಲ್ಯಗಳ ಪಾತಾಳ ಕುಸಿತ ಇನ್ನೊಂದೆಡೆ.

### ಕರಕೊಡುವವರು

ಶಿಕ್ಷಣವೆಂದರೆ ದೇಶಕ್ಕೆ ಮಾನವಸಂಪನ್ಮೂಲಗಳನ್ನು ಒದಗಿಸುವ ಕೇಂದ್ರಸಾಧನ. ಆದರೆ ನಮ್ಮ ಶಿಕ್ಷಣ ಸಂಸ್ಥೆಗಳಿಂದ ಎಂತಹ ಮಾನವಸಂಪತ್ತು ಹೊರಬೀಳುತ್ತದೆ? ವಿದ್ಯಾರ್ಥಿಗಳಲ್ಲಿ ಅಪರಾಧಮಟ್ಟದ, ಭಯಾನಕ ಅಶಿಸ್ತು ಬೆಳೆಯುತ್ತಿದೆ. ಮುಷ್ಕರ ನಿರತ, ಬೇಡಿಕೆಭರಿತ, ಹೊಣೆರಹಿತ (ಕೆಲವು ಅಪವಾದಗಳನ್ನು ಬಿಟ್ಟರೆ) ಶಿಕ್ಷಕ-ನಾಯಕರ ಸಂಘಟನೆಗಳಿವೆ. ಇನ್ನೊಂದೆಡೆ ಭಾರತಮಾತೆಯ ಭವಿತವ್ಯ-ನೈತಿಕ ಭವಿತವ್ಯ - ಎತ್ತ ಸಾಗಿದೆ?

ಇಂದಿನ ವಿದ್ಯಾರ್ಥಿ, ವಿದ್ಯಾ + ಅರ್ಥಿಯಲ್ಲ, ವಿತ್ತಾರ್ಥಿ ಮಾತ್ರ. ಅದಕ್ಕೆ ಆಧಾರ ಪರೀಕ್ಷಾರ್ಥಿ; ಏನಕೇನ ಪ್ರಕಾರೇಣ ಆ ಪರೀಕ್ಷೆಯಲ್ಲಿ ಹೆಚ್ಚಿನ ಅಂಕಗಳಿಸಬಯಸುವ ಅರ್ಥಿ. ಬ್ರಿಟಿಷರು ಸ್ಥಾಪಿಸಿದ ಶಿಕ್ಷಣಕ್ರಮದಿಂದ, ಶಿಕ್ಷಣವ್ಯವಸ್ಥೆಯಿಂದ. ಸಾಕಷ್ಟು ಹಣ ಸಂಪಾದನೆಗೆ ಬೇಕಾದ ನೌಕರಿ ಗಿಟ್ಟಿಸುವುದೊಂದೇ ಶಿಕ್ಷಣದ ಇಂದಿನ ಗುರಿ. ಅದಕ್ಕೆ ಅಗತ್ಯ ಆಧಾರ ಪರೀಕ್ಷಾಂಕಗಳು. ಆದ್ದರಿಂದ ಶಿಕ್ಷಣಕ್ರಮ, ವ್ಯವಸ್ಥೆಗಳು ಪರೀಕ್ಷಾ ನಿಯಂತ್ರಣದಲ್ಲಿವೆ. ಪಾಲಕರಿಗೂ ಮಕ್ಕಳ ಪರೀಕ್ಷಾಂಕ ಸಾಧನೆಯೇ ಗುರಿ. ಆ ಗುರಿ ಸಾಧನೆಯ ಪ್ರಮಾಣವೇ ಯಾವ ಶಾಲೆ, ಯಾವ ಕಾಲೇಜು ಉತ್ತಮ ಎಂದು ಅಳೆಯಲು ಆಧಾರ. ಇದು ವಾಸ್ತವಿಕ ಸತ್ಯ. ಈ ವಸ್ತುಸ್ಥಿತಿಯಲ್ಲಿ ಮೂರು E - Education (ಶಿಕ್ಷಣ), Examination (ಪರೀಕ್ಷೆ) Employment (ನೌಕರಿ)ಗಳಲ್ಲಿ ಅಪವಿತ್ರಸಂಬಂಧ ಎದ್ದು ಕಾಣುತ್ತದೆ. ಹೀಗಿರುವಾಗ, ನಮ್ಮ ಶಿಕ್ಷಣಕ್ರಮ ಕೇವಲ ಪರೀಕ್ಷೆಗಾಗಿ ತಯಾರು ಮಾಡುವುದೇ ಆಗಿದೆ ಎಂದು ನಾವು ಆಕ್ಷೇಪ ಎತ್ತುವಲ್ಲಿ ಏನರ್ಥವಿದೆ? ಶಿಕ್ಷಣಕ್ರಮದಲ್ಲಿ ನಾವು ಏನನ್ನು ಅಳವಡಿಸಿದರೂ (ಉದಾ. ಶಾರೀರಿಕ ಕ್ರಮದ ಉತ್ಪಾದಕ ಕಾರ್ಯಾನುಭವ, ಸಮಾಜಸೇವೆ. ನೀತಿಶಿಕ್ಷಣ, ಕಲಾಶಿಕ್ಷಣ, ಯೋಗಶಿಕ್ಷಣ ಇತ್ಯಾದಿ) ಅವು ಪರೀಕ್ಷಾ ವಿಷಯಗಳಲ್ಲದ್ದಿರಿಂದ ಅವೆಲ್ಲ ಅಲಕ್ಷ್ಯಕ್ಕೊಳಗಾಗಿವೆ. ಈ ಮೂರು Eಗಳ ಅಪವಿತ್ರ ಸಂಬಂಧವನ್ನು ಕಡಿದು ಹಾಕಲೇಬೇಕು (Degrees must be delinked from jobs) ಎಂದು ಎಲ್ಲ ಸಮಿತಿಗಳು ಹೇಳುತ್ತ ಬಂದಿವೆ. ಆದರೆ ಅದನ್ನು ಜಾರಿಗೆ ತರಲಾಗಿಲ್ಲ. ಅಂತೆಯೆ ಶಿಕ್ಷಣವು ಅಜ್ಞ ರಾಜಕಾರಣಿಗಳ ಹಾಗೂ ಅಹಂಕಾರಿ ಅಧಿಕಾರಿಗಳ ಕೈಯಲ್ಲಿ ಕೈದಿಯಾಗಿದೆ. ಸ್ವಾತಂತ್ರ್ಯದ ಸುವರ್ಣ ವರ್ಷದಲ್ಲಿ ಕೊಲೆಗಡುಕರಿಗೆ ಜೈಲಿನಿಂದ ಬಿಡುಗಡೆ ಯಾದರೂ, ಶಿಕ್ಷಣವೆಂಬ ಕೈದಿಗೆ ಬಿಡುಗಡೆ ಇಲ್ಲ. ಇದಕ್ಕೆ ಪರಿಹಾರವಿಲ್ಲವೇ? ಅದು ತಿಳಿಯಬೇಕಾದ ಮೂಲಭೂತ ಪದಗಳ ಅರಿವು ಅಗತ್ಯ; ಶಿಕ್ಷಣ, ಶಿಕ್ಷಕ, ಶಿಕ್ಷಣಕ್ರಮ, ಗುರಿ-ಸಾಧನ ಸಂಬಂಧ ಇತ್ಯಾದಿ ಅಂಶಗಳು ಮುಖ್ಯವಾದುವು. ಇವುಗಳ ಸಂಶೋಧನಾತ್ಮಕ, ವೈಜ್ಞಾನಿಕ ಅರಿವೇ ಶಿಕ್ಷಣದ ತಂತ್ರ ಜ್ಞಾನ. ಚುನಾವಣೆಯಲ್ಲಿ ಆರಿಸಿಬಂದ ರಾಜಕಾರಣಿಗಳಿಗೆ ಮತ್ತು ಇಲಾಖೆಗಳಿಂದ ಇಲಾಖೆಗಳಿಗೆ ಮೇಲಿಂದ ಮೇಲೆ ಹಾರಾಡುವ ಹಕ್ಕಿಯಂತಿರುವ ಅಧಿಕಾರಿಶಾಹಿ ತಜ್ಞರಿಗೆ ಶಿಕ್ಷಣದ ತಾಂತ್ರಿಕ ಜ್ಞಾನದ ಸ್ವರೂಪದ ಅರಿವೇ ಇಲ್ಲ. ಆ ಅರಿವನ್ನು ಪಡೆಯುವ ಅಗತ್ಯವೇ ಅವರಿಗೆ ಕಂಡುಬಂದಿಲ್ಲ. ಆದರೆ ಶಿಕ್ಷಣ ಕೈದಿಯ ಜೈಲರು ಅವರೇ. ಇದು ಇಂದಿನ ಜಟಿಲ ವಾಸ್ತವ ಸತ್ಯ.

***'ಶಿಕ್ಷಣ' ಎಂದರೇನು?***

ಮೇಲೆ ವಿವರಿಸಿದ ಹಿನ್ನೆಲೆಯಲ್ಲಿ ವಿವಿಧ ಅಂಶಗಳ ಅರ್ಥವನ್ನು ಆಸಕ್ತಿಯುಳ್ಳವರು ತಿಳಿಯಬೇಕು. ಇಂಗ್ಲೀಷ್‌ನಲ್ಲಿ 'School' ಎಂಬ ಪದ 'Schola' ಎಂಬ ಗ್ರೀಕ್ ಪದದಿಂದ ಬಂದದ್ದು. 'Schola' ಎಂದರೆ 'Leisure' ಎಂದರೆ ವಿರಾಮ-ಆರಾಮ ಕಾಲ. ಗ್ರೀಸ್ ದೇಶದಲ್ಲಿ - ಅಥೆನ್ಸಿನಲ್ಲಿ - ಆಗ ಜನಸಂಖ್ಯೆ ಶೇಕಡಾ ೧೧ರಷ್ಟು ಸರದಾರರು. ಶೇಕಡಾ ೮೯ರಷ್ಟು 'Serfs' ಎಂದರೆ ಜೀತದಾಳುಗಳು. ಆ ಆಳುಗಳ ಮಕ್ಕಳು ತಮ್ಮ ತಂದೆಯರ ಜೊತೆಯಲ್ಲಿ ಚಿಕ್ಕವಯಸ್ಸಿನಲ್ಲಿಯೇ ಜೀತದಾಳು (ಮರಿ) ಆಗಿ, ದುಡಿಯುವವರು. ಆದರೆ ಸರದಾರರ ಮಕ್ಕಳು ಏನು ಮಾಡಬೇಕು? ಅವರನ್ನು ಶಾರೀರಿಕ ಶ್ರಮದ ಕೆಲಸಕ್ಕೆ ಹಚ್ಚುವಂತಿಲ್ಲ. ಅನೇಕ ಗಂಟೆಗಳ ವಿರಾಮ ಕಾಲವನ್ನು ಕಳೆಯುವುದು ಹೇಗೆ? ಅದಕ್ಕೊಂದು ಯೋಜನೆ, ಶಾರೀರಿಕ ಸಂಪತ್ತನ್ನು ಸಂಪಾದಿಸಲು ಒಂದು 'gymnasium' ಎಂದರೆ ವ್ಯಾಯಾಮ ಶಾಲೆ. ಆದರೆ ಎಷ್ಟು ಹೊತ್ತು ವ್ಯಾಯಾಮ ಮಾಡಬಹುದು? ಅದಕ್ಕೆ ಪೂರಕವಾಗಿ ಮನರಂಜನೆಗೆ music. ಸರದಾರರ ಮಕ್ಕಳನ್ನು ಒಟ್ಟಿಗೆ ಗುಂಪುಗಳಲ್ಲಿ ಸೇರಿಸಿ, ಗುಂಪಿಗೊಂದು ಕೇಂದ್ರ ನಿರ್ಮಿಸಿ ವ್ಯಾಯಾಮ, ಸಂಗೀತ ಇವುಗಳ ಏರ್ಪಾಡಾಯಿತು. ವಿರಾಮಕಾಲ ಕಳೆಯಲು ನಿರ್ಮಾಣವಾದ ಈ ಕೇಂದ್ರಗಳಿಗೆ 'ವಿರಾಮಗೃಹ' ಎಂದರೆ 'Schola' ಎಂಬ ನಾಮಕರಣವಾಯಿತು. ಮುಂದೆ ವ್ಯಾಯಾಮಕ್ಕೆ ಹೊಂದಿಸಿ ಶರೀರಶಾಸ್ತ್ರ, ಆಹಾರಶಾಸ್ತ್ರ, ಅದಕ್ಕೆ ಬೇಕಾದ ವಿಜ್ಞಾನ, ಗಣಿತ, ರಾತ್ರಿ ಹಗಲುಗಳ ಅಧ್ಯಯನಕ್ಕೆ ಜ್ಯೋತಿಷ್ಯಜ್ಞಾನ ಇತ್ಯಾದಿ ಸೇರಿಕೊಂಡವು. ಹಾಗೆ music ಸಂಗೀತಕ್ಕೆ ಹೊಂದಿಸಿ, ಭಾಷೆ, ಉಚ್ಚಾರ, ವ್ಯಾಕರಣ, ಸಾಹಿತ್ಯ, ಕಾವ್ಯ, ಸಮಾಜಜ್ಞಾನ, ರಾಜಕೀಯ ಜ್ಞಾನ - ಇವು ಸೇರಿಕೊಂಡವು. ಮೂಲತಃ ವಿರಾಮವೇ ಅವುಗಳ ಉದ್ದೇಶ. ಇವೇ ಇತಿಹಾಸದ ಗತಿಯಲ್ಲಿ 'School', 'ಶಾಲೆ'ಗಳಾಗಿ; ಮಧ್ಯಯುಗದಲ್ಲಿ ವಿದ್ಯಾಲಯಗಳಾಗಿ ವಿಸ್ತಾರಗೊಂಡವು. ಈ ತಳ ಬದಲಾಗಿಲ್ಲ. ಈ ವಿಷಯಗಳ ಸಂಕರವೇ ಇಂದು ಶಾಲಾಭ್ಯಾಸ, ಕಾಲೇಜಾಭ್ಯಾಸಗಳಾಗಿ ಮುಂದುವರಿದಿದೆ.

ಆದರೆ 'ಶಿಕ್ಷಣ'ವೆಂಬ ಪದ ಭಾರತೀಯ ಮೂಲದ್ದು. 'ಶಾಸ್'-ಶಿಸ್ತು - ಇದು ಅದರ ತಳಹದಿ. ಶರೀರ, ಬುದ್ಧಿ, ಮನಸ್ಸು, ಆತ್ಮಗಳನ್ನು ಒಂದು ಶಿಸ್ತಿಗೆ ಒಳಪಡಿಸಿ ಶಿಸ್ತಿನ ಸ್ವಯಂಪೂರ್ಣ ವ್ಯಕ್ತಿ-ನಾಗರಿಕ-ನಿರ್ಮಾಣವೇ ಗುರುಕುಲದ ಗುರಿಯಾಯಿತು. ಅದರ ನಿಯಂತ್ರಣ, ವಿಕಾಸ, ಪರಿವರ್ತನೆ ಎಲ್ಲ ಗುರುಗಳ ಕೈಯಲ್ಲಿ ಗುರುಕುಲವಾಸದಲ್ಲಿ ಗುರು-ಶಿಷ್ಯರು ಕೂಡಿ ಶುಲ್ಕರಹಿತವಾದ ಪರಾ-ಅಪರಾ ವಿದ್ಯೆ ಪಡೆದು, ಶಿಸ್ತಿನ ವ್ಯಕ್ತಿಗಳಾಗಿ, ಹೊರಬೀಳುತ್ತಿರುವ ನಾಗರಿಕರು ಸಮಾಜದ ಸುಖ-ಶಾಂತಿಗಳಿಗೆ ತಮ್ಮನ್ನು ಸಮರ್ಪಿಸಿಕೊಳ್ಳುತ್ತಿದ್ದರು.

ಇಂದು ಸರ್ಕಾರ-ಸಮಾಜ-ದೇಶ ವ್ಯವಸ್ಥೆ ಮಾಡಿದ್ದು, ನೌಕರಿಗೆ ಸಂಬಂಧಪಟ್ಟ ವಿದ್ಯೆ ಕೌಶಲಗಳನ್ನು ನೀಡುವುದಕ್ಕಾಗಿ ಶಾಲಾ ಕಾಲೇಜುಗಳು. ಆದರೆ ಬಯಸುವ ಫಲ ಮಾತ್ರ ಮೌಲ್ಯಬದ್ಧ-ಶಿಸ್ತಿನ ನಾಗರಿಕರನ್ನು. ಈ ಗುರಿ-ಸಾಧನಗಳ ವಿಸಂಗತತೆಯಲ್ಲಿ ಇಂದಿನ ದೋಷಗಳ ಮೂಲ ಅಡಗಿದೆ. "You can't grow figs out of thorns"ಎಂಬ ಇಂಗ್ಲೀಷ್ ಗಾದೆಯಿದೆ. 'ಬಿತ್ತುವದೊಂದು ಬಯಸುವ ಬೆಳೆ ಬೇರೊಂದು'. ಈ ವಿರೋಧವನ್ನು ಜನ ತಿಳಿದುಕೊಳ್ಳಬೇಕು.

***ಸಂಪೂರ್ಣ ವ್ಯಕ್ತಿತ್ವ***

"All round development of the child is the aim of education" ಎಂದರೆ ಮಗುವಿನ ಸಂಪೂರ್ಣ ವ್ಯಕ್ತಿತ್ವ ವಿಕಾಸವೇ ಶಿಕ್ಷಣದ ಗುರಿ ಎಂದು ಎಲ್ಲರೂ ಹೇಳುವವರೆ, ಹಾಗೆಂದರೇನು? ಈ all-roundದಲ್ಲಿ ಅಡಕವಾದ ಅಂಶಗಳು ಯಾವುವು? ಇವುಗಳ ಸ್ಪಷ್ಟಕಲ್ಪನೆ ಬಹುಜನರಿಗೆ ಇದ್ದಂತಿಲ್ಲ. ಸುದೈವದಿಂದ ೧೯೮೬ರ (೧೯೯೨ರಲ್ಲಿ ಸುಧಾರಿಸಿದ್ದು) ಹೊಸ ಶಿಕ್ಷಣ ನೀತಿಯಲ್ಲಿ, ಅದನ್ನು ವಿವರಿಸುವ ಶಾಲಾಭ್ಯಾಸಕ್ರಮ ನಿರೂಪಣೆಯ ಪುಸ್ತಿಕೆಯಲ್ಲಿ (Curriculum Frame work) ಚಿತ್ರಮುಖೇನ ಸ್ಪಷ್ಟೀಕರಿಸಲಾಗಿದೆ.

೧. ಭಾಷೆಗಳು (Languages)
೨. ಸಮಾಜಜ್ಞಾನ (Social studies)
೩. ಗಣಿತ (Mathematics)
೪. ವಿಜ್ಞಾನ (Science)
೫. ಆರೋಗ್ಯ ಶಿಕ್ಷಣ (ಶಾರೀರಿಕ ಶಿಕ್ಷಣ ಸಹಿತ)
೬. ಉತ್ಪಾದಕ ಕಾರ್ಯಕೌಶಲ-ಸಮಾಜಸೇವೆ
೭. ನೈತಿಕ ಶಿಕ್ಷಣ (ಆಧ್ಯಾತ್ಮಿಕ ಸಹಿತ)
೮. ಕಲಾ ಶಿಕ್ಷಣ (ಸಂಗೀತ, ನೃತ್ಯ, ನಾಟಕ, ಚಿತ್ರಕಲೆಗಳನ್ನು ಒಳಗೊಂಡು) 'C' ಎಂದರೆ 'Child' ಮಗು.

**ಸಮಗ್ರ ವ್ಯಕ್ತಿತ್ವದಲ್ಲಿ ಮಹತ್ವದ ತೂಕದ ಶೇಕಡಾ ಪ್ರಮಾಣ:**

೧ + ೨ + ೩ + ೪ = ಶೇಕಡಾ ೪೦ ಮಾತ್ರ

೫ + ೬ + ೭ + ೮ = ಶೇಕಡಾ ೬೦

ಈಗಿನ ವಿಷಯಜ್ಞಾನ ವಿಷಯಗಳಿಗೆ ಶೇಕಡಾ ೫೦ಕ್ಕಿಂತ





ಕಡಿಮೆ. ವ್ಯಕ್ತಿತ್ವ ವಿಕಾಸದ ಉಳಿದ ಅಂಶಗಳಿಗೆ ಶೇಕಡಾ ೬೦. ಇವೆಲ್ಲ ಪ್ರಥಮ ಆವೃತ್ತಿಯಲ್ಲಿ ಇದ್ದವು. ಮುಂದೆ academic ವಿಷಯಗಳಿಗೆ ಹೆಚ್ಚು ಒತ್ತುಕೊಟ್ಟು ಬದಲಾವಣೆ ಮಾಡಿಕೊಳ್ಳಲಾಗಿದೆ.

ಈ ಸದುದ್ದೇಶಿತ, ತುಂಬ ಉಪಯುಕ್ತವಾದ ಯೋಜನೆ ಕೇವಲ ತತ್ವವಾಗೇ ಉಳಿದು, ನೌಕರಿ ಗುರಿಯ ಮುಂಚಿನ ಯೋಜನೆಯೇ ಜಾರಿಯಲ್ಲಿ ಮುಂದುವರೆಯುತ್ತಿರುವುದು ಭಾರತದ ದುರ್ದೈವ.

**ವ್ಯಾಖ್ಯೆಗಳು :**

ಶಿಕ್ಷಣದ ಅರ್ಥ ಮತ್ತು ಗುರಿಗಳನ್ನು ಅರ್ಥಗರ್ಭಿತ ವ್ಯಾಖ್ಯೆಗಳಲ್ಲಿ ಹೇಳುವುದುಂಟು. ಅಂತಹ ಕೆಲವು ವ್ಯಾಖ್ಯೆಗಳನ್ನು ನೋಡುವಾ. ಪಾಶ್ಚಾತ್ಯ ಶಿಕ್ಷಣ ತತ್ವಜ್ಞಾನಿಯೊಬ್ಬ ಶಿಕ್ಷಣದ ಪರಮೋದ್ದೇಶವನ್ನು ಚುಟುಕಾಗಿ 'a sound mind in a sound body' ಎಂದರೆ ಸ್ವಾಸ್ಥ್ಯ ಶರೀರದಲ್ಲಿ ಸ್ವಾಸ್ಥ್ಯಮನಸ್ಸನ್ನು ವಿಕಸಿಸಿ ಸ್ಥಾಪಿಸುವುದು ಎಂದಿದ್ದಾರೆ. ಈ ವ್ಯಾಖ್ಯೆಯಲ್ಲಿ ಶರೀರ ಮತ್ತು ಮನಸ್ಸು ಇವೆರಡರ ವಿಕಾಸವನ್ನು ಅಳವಡಿಸಲಾಗಿದೆ. ಸಂಪೂರ್ಣ ವ್ಯಕ್ತಿತ್ವ ವಿಕಾಸಕ್ಕೆ ಇಷ್ಟೇ ಸಾಲದು. 'ಆತ್ಮವಿಕಾಸ'ದ ಅಂಶ ಇದರಲ್ಲಿ ಸೇರಲೇಬೇಕು. ಇದು ಅಪ್ಪಟ ಭಾರತೀಯ ದೃಷ್ಟಿಕೋನ. ಎಲ್ಲರಲ್ಲಿಯೂ ಪರಮಾತ್ಮನ ಅಂಶವಿದೆ. ಆ ಅಂಶ ಪರಮಾತ್ಮನಂತೆ ಪರಿಪೂರ್ಣ (perfect) ಆದದ್ದು. ಸುಪ್ತಸ್ಥಿತಿಯಲ್ಲಿ ಇದ್ದುದನ್ನು ವಿಕಸಿಸುವುದು, ಪ್ರಕಟಗೊಳಿಸುವುದು ಶಿಕ್ಷಣದ ಮುಖ್ಯ ಗುರಿ. **"ಹುಟ್ಟಿನಿಂದಲೇ ಮಾನವನಲ್ಲಿ ಹುದುಗಿದ ಪರಿಪೂರ್ಣತೆಯ ಆವಿಷ್ಕಾರವೇ ಶಿಕ್ಷಣ"** ಎಂದು ಸಾರಿದವರು ಸ್ವಾಮಿ ವಿವೇಕಾನಂದರು. ಆತ್ಮಜ್ಞಾನವೇ ಋಷಿಗಳ ಕಾಲದ ಗುರುಕುಲಗಳಲ್ಲಿ ಪ್ರಧಾನ ಕೇಂದ್ರವಾಗಿತ್ತು. ಅದನ್ನು ಮತ್ತೆ ಅಳವಡಿಸಿ, ಆಧುನಿಕ ಗುರುಕುಲ. **'ಶಾಂತಿ ನಿಕೇತನ'**ವನ್ನು ಗುರುದೇವ ರವೀಂದ್ರನಾಥ ಠಾಕೂರರು ಸ್ಥಾಪಿಸಿ ಬೆಳೆಸಿದರು. ಪಂಚಕೋಶಗಳ ಪರಿಕಲ್ಪನೆಯ ಆಧಾರದ ಮೇಲೆ ಯೋಗಿ ಶ್ರೀ ಅರವಿಂದರು ತಮ್ಮ ವೈಶಿಷ್ಟ್ಯಪೂರ್ಣವಾದ **"ಸಮಗ್ರ ಶಿಕ್ಷಣ"** (Integral Education) ಯೋಜನೆಯನ್ನು ಜಾಗತಿಕ ಕೊಡುಗೆಯಾಗಿ ಭವಿಷ್ಯಕ್ಕೆ ನೀಡಿ, ಜಾರಿಗೊಳಿಸಿ ತೋರಿಸಿದರು.

ಹೊರಗಿನ ವಾತಾವರಣದೊಡನೆ ಪಂಚೇಂದ್ರಿಯದ ಅನ್ನಮಯಕೋಶಕ್ಕೆ ಸಂಪರ್ಕವುಂಟಾದಾಗ ಆ ಕೋಶವನ್ನು ಭೇದಿಸಿ, ಪ್ರಾಣಮಯ, ಮನೋಮಯ, ವಿಜ್ಞಾನಮಯ (ಈಗಿನ science ಅರ್ಥದಲ್ಲಿ ಅಲ್ಲ) 'ಪರಾ', 'ಅಪರಾ'ವಿದ್ಯೆಗಳ ವಿಶೇಷ ಜ್ಞಾನಕೋಶವನ್ನು ಭೇದಿಸಿ, ಆತ್ಮಕ್ಕೆ ಪರಮಾತ್ಮನ ಅನುಸಂಧಾನ ವಾಗುವಂತೆ ಮಾಡಿದಾಗ ಆನಂದಮಯ (bliss) ಕೋಶದ ಬಾಗಿಲು ತೆರೆದು, ಪ್ರವೇಶ ದೊರೆತು ಸಾಕ್ಷಾತ್ಕಾರದ ಅನುಭವ ವಾಗುವುದು. ಜೀವಿಗಳಿಗೆ ಈ ಸಾಕ್ಷಾತ್ಕಾರ ದೊರೆಯಲು ಸಾಧನ ವಾಗುವುದೇ ಶಿಕ್ಷಣ ಎಂಬ ಅದ್ಭುತಯೋಜನೆ ಭಾರತದ ಕೊಡುಗೆ. ಸಾರ್ವತ್ರಿಕವಾಗಿ, ಸದಾಕಾಲವೂ, ಶಾಶ್ವತವಾಗಿ ಉಳಿಯುವ ಶೈಕ್ಷಣಿಕ ಪರಿಕಲ್ಪನೆ-ಯೋಜನೆ ಇದು.

ವಾಸ್ತವಕ್ಕೆ ಹತ್ತಿರವಾಗಿ, ದಿನನಿತ್ಯದ ಅಗತ್ಯಗಳಿಗೆ ಉಪಯುಕ್ತವಾದ ಶಿಕ್ಷಣದ ಇನ್ನೊಂದು ಯೋಜನೆಯನ್ನು ಮಹಾತ್ಮಾ ಗಾಂಧಿಯವರು ಭಾರತಕ್ಕೆ ನೀಡಿ ಪ್ರಯೋಗಿಸಿ ತೋರಿಸಿದರು. "ಮಗುವಿನಲ್ಲಿ-ಮಾನವನಲ್ಲಿ ಹುದುಗಿದ ಶ್ರೇಷ್ಠವಾದುದನ್ನು - ಶರೀರ, ಮನಸ್ಸು, ಆತ್ಮ - ಈ ಎಲ್ಲದರಲ್ಲೂ ವಿಕಾಸಗೊಳಿಸುವುದೇ ಶಿಕ್ಷಣ" ಎಂದು ವ್ಯಾಖ್ಯಾನಿಸಿದರು. ಬೇಸಿಕ್ ಎಜ್ಯುಕೇಶನ್ ಎಂದರೆ **"ಮೂಲ ಶಿಕ್ಷಣ"** ವೆಂಬುದಾಗಿ ಖ್ಯಾತವಾಯಿತು. ಇವರುಗಳ ಸಮಕಾಲೀನವಾಗಿ ಕಾಂಗ್ರಿ, ಹರದ್ವಾರ ಮೊದಲಾದವುಗಳಲ್ಲಿ ಪರಂಪರಾಗತ **'ಗುರುಕುಲ'**ಗಳು ಸಾಗಿ ಬಂದವು. ಆದರೆ ಯಾವ ಕಾಂಗ್ರೆಸ್ ಚಳುವಳಿ ಪಾಶ್ಚಾತ್ಯ ಶಿಕ್ಷಣಕ್ರಮವನ್ನು ಸರಕಾರಕ್ಕಾಗಿ ನೌಕರರನ್ನು ನಿರ್ಮಾಣಮಾಡುವ, ಭಾರತೀಯ ಸಂಸ್ಕೃತಿ, ಆಶೋತ್ತರಗಳಿಗೆ ಸ್ಪಂದಿಸಿದ ನಿಸ್ಸತ್ವ ವ್ಯವಸ್ಥೆಯೆಂದು ಟೀಕಿಸಿ, ಸ್ವಾತಂತ್ರ್ಯ ಬಂದರೆ, ವೈಶಿಷ್ಟ್ಯಪೂರ್ಣ ಭಾರತೀಯ ಶಿಕ್ಷಣವನ್ನು ರೂಪಿಸಲು ಪಣ ತೊಟ್ಟಿದ್ದರೊ, ಅದೇ ನಾಯಕರೇ, ಅದೇ ರಾಷ್ಟ್ರೀಯ ಕಾಂಗ್ರೆಸ್ಸೇ ಅಂತಹ ಶಿಕ್ಷಣ ಕ್ರಮವನ್ನು ರೂಪಿಸಿದೆ, ಇದ್ದ ಪಾಶ್ಚಾತ್ಯ ಶಿಕ್ಷಣ ಪದ್ಧತಿಯನ್ನೇ ಇನ್ನಷ್ಟು ಭದ್ರವಾಗಿ ಬೆಳೆಸಿಕೊಂಡು ಬಂದುದು ಭಾರತದ ಮಹಾದುರಂತ. ಅದರ ಪರಿಣಾಮವಾಗಿ ಆಂಗ್ಲಮಾಧ್ಯಮದ ಪರೀಕ್ಷಾಂಕ ಸಾಧನೆಯ ಪ್ರೇರಿತ ಹೆಗ್ಗಣಸ್ಪರ್ಧೆ (rat-race) ನಮ್ಮ ಮೇಲೆ ಸಂಪೂರ್ಣ ಹಿಡಿತ ಸಾಧಿಸಿದೆ. ಈ ಅಧೋಗತಿಗೆ ಕಾರಣರಾದ ಎಲ್ಲ ರಾಜಕೀಯ ಪಕ್ಷಗಳ ರಾಜಕಾರಣಿಗಳೇ, ಮೌಲ್ಯಕುಸಿತ, ಗುಣಮಟ್ಟ ಕುಸಿತಗಳನ್ನು ಖಂಡಿಸಿ, ಶಿಕ್ಷಣ ವ್ಯವಸ್ಥೆಯನ್ನು ಪರಿವರ್ತಿಸಲು ಸಮಾಜಕ್ಕೆ ಒಂದೇ ಸಮನೆ ಕೂಗಿ ಕರೆ ನೀಡುತ್ತಿರುವುದು ಒಂದು ಅಣಕ, ವಿಡಂಬನೆ.

***ಶಿಕ್ಷಣದ ಉದ್ದೇಶಗಳು***

ಶಿಕ್ಷಣದ ಪರಮೋದ್ದೇಶವೆಂದರೆ **'ಸ್ವಸ್ಥಸಮಾಜ ನಿರ್ಮಾಣ'**. ಇಲ್ಲಿ ಸ್ವಸ್ಥ ಎಂದರೆ ಶಾರೀರಿಕ, ಬೌದ್ಧಿಕ, ಭಾವನಾತ್ಮಕ, ಆಧ್ಯಾತ್ಮಿಕಸ್ವಾಸ್ಥ್ಯಗಳ ಸಮಗ್ರಸ್ವಾಸ್ಥ್ಯ. ಇದಕ್ಕೆ ಪೋಷಕ ವಾಗುವಂತೆ ಉಪೋದ್ದೇಶಗಳು ಬೇಕು.

೧. ಮಗುವಿನ ಶಾರೀರಿಕ, ಬೌದ್ಧಿಕ, ಭಾವನಾತ್ಮಕ, ಆಧ್ಯಾತ್ಮಿಕ ವಿಕಾಸ - ಇವುಗಳ ಅಂಗವಾಗಿ -

❑ ಸಂಬಂಧಿತ ವಿಷಯಗಳ ಜ್ಞಾನ.

- ಸ್ವಾವಲಂಬನೆಗೆ ಬೇಕಾದ ಕ್ರಿಯಾಶಕ್ತಿ-ಕೌಶಲಗಳ ವಿಕಾಸ.
- ಸತ್ಯ, ಧರ್ಮಬುದ್ಧಿ, ಪ್ರಾಮಾಣಿಕತೆ, ವಿನಯ, ಸರ್ವಧರ್ಮ ಸಮಭಾವ, ಐಕ್ಯತಾಭಾವ, ತ್ಯಾಗ, ಸಂಕಟದಲ್ಲಿರುವವರಿಗೆ ಅನುಕಂಪ, ಪರಹಿತ ಕಾಳಜಿ ಮುಂತಾದ ಸಮಾಜ ಸ್ವಾಸ್ಥ್ಯಾನುಗುಣವಾದ ಮೌಲ್ಯಗಳ ವಿಕಾಸ.
- ಪ್ರತಿಫಲಾಪೇಕ್ಷೆಯಿಲ್ಲದೆ, ದುಃಖಿತರ ಕಣ್ಣೀರೊರಸಿ ಸಾಂತ್ವನ ನೀಡುವ ಕ್ರಿಯಾತ್ಮಕ ಸಹಾಯ ನೀಡುವ, ಉದಾರ ಹೃದಯತೆ.
- ವಿಶ್ವಸ್ವರೂಪಿ ಪರಮಾತ್ಮನ ಭಕ್ತಿಯಲ್ಲಿ, ಆನಂದಾನುಭಾವದಲ್ಲಿ ಸದಾಕಾಲವೂ ಇರುವ ತಾದಾತ್ಮ್ಯತೆ.
- ಸಾಮಾಜಿಕ ಸೇವಾಸಂಸ್ಥೆಗಳನ್ನು ಕಟ್ಟಲು, ಕಟ್ಟಿಯೂ ಅಧಿಕಾರ ಸ್ಥಾನಗಳಿಂದ ದೂರಿರುವ ಮುಂದಾಳತ್ವ ವಿಕಾಸ.
- ಕಲಾತ್ಮಕ ವಿಕಾಸ - ವೈಯಕ್ತಿಕ ಹಾಗೂ ಗುಂಪಿನದು. ಇವಕ್ಕೆ ಅನೇಕ ವಿವರೋದ್ದೇಶಗಳನ್ನು ಜೋಡಿಸಬಹುದು.

***ಶಿಕ್ಷಣಾಡಳಿತದ ಗುರಿಗಳು***

೧. ದೋಷ-ದೂಷಣೆ-ಅಹಂಕಾರಗಳ ನಿವಾರಣೆಗೆ ಮೊಟ್ಟ ಮೊದಲು ಎಲ್ಲ ಸ್ಪರ್ಧೆಗಳನ್ನು, ಬಹುಮಾನಗಳನ್ನು, ಪರೀಕ್ಷೆಗಳನ್ನು ರದ್ದುಪಡಿಸಬೇಕು. ಅವುಗಳ ಸ್ಥಳದಲ್ಲಿ ಆತ್ಮಾವಲೋಕನ, ಸ್ವ-ಪರೀಕ್ಷೆಯ ವಿವಿಧ ಸಾಧನಗಳನ್ನು ನೀಡಬೇಕು. ಪ್ರತಿಯೊಂದು ಮಗುವಿಗೆ ತನ್ನದೇ ಆದ ಹುದುಗಿದ ಶಕ್ತಿಗಳಿವೆ. ಅವುಗಳನ್ನು ಪ್ರೇರೇಪಿಸಿ, ತನ್ನ ವೈಯಕ್ತಿಕ ಪ್ರಗತಿಯನ್ನು ತಾನೇ ಸಾಧಿಸುತ್ತ, ಪರೀಕ್ಷಿಸಿಕೊಳ್ಳುತ್ತ, ತಿದ್ದಿಕೊಳ್ಳುತ್ತ ಹೋಗುವುದನ್ನು ಸುಗಮಗೊಳಿಸುವುದೇ ಶಿಕ್ಷಣದ ಪ್ರಕ್ರಿಯೆ. ಇಲ್ಲಿ ಒಬ್ಬ ವಿದ್ಯಾರ್ಥಿ ಇನ್ನೊಬ್ಬನೊಡನೆ ತನ್ನನ್ನು ಹೋಲಿಸಿಕೊಂಡು, ಅಸೂಯೆ ಅಸಮಾಧಾನಕ್ಕೆ ಒಳಗಾಗದಂತೆ, ಅದಕ್ಕ ಆಸ್ಪದವೇ ಇರದಂತೆ ಸಾಗಬೇಕು.

ಇದು 'utopia' - ಕಾಲ್ಪನಿಕ ಯೋಜನೆಯಲ್ಲ. ಇದಕ್ಕನ್ವಯಿಸುವ ಫೀ, ಡೊನೇಶನ್ ರಹಿತ, ಊಟ ವಸತಿಗಳಿಗೂ ಫೀ ಇಲ್ಲದ ಒಂದು ಪ್ರತ್ಯಕ್ಷ ಪ್ರಯೋಗ ಜಾರಿಗೊಂಡು ನಾಲ್ಕು ವರ್ಷಗಳಾಗಿವೆ. ಇದು ಬೆಂಗಳೂರು ತಾಲ್ಲೂಕಿನ ರಾಮೋಹಳ್ಳಿ ಹತ್ತಿರದ ಒಂದು ಗುರುಕುಲ - ಆಧುನಿಕ ಸಮಗ್ರಶಿಕ್ಷಣದ 'ಮೈತ್ರೇಯಿ' ಗುರುಕುಲ - ನಡೆಯುತ್ತಿದೆ. ಆಸಕ್ತಿಯುಳ್ಳವರು ಸಂದರ್ಶಿಸಿ ಖಾತ್ರಿಮಾಡಿಕೊಳ್ಳಬಹುದು. ಸ್ವಾಗತಕಮಾನು ಹಾಗೂ ಸ್ಥಳಕ್ಕೆ 'ಶುಭಂ ಕರೋತಿ' ಎಂಬ ನಾಮಕರಣವಿದೆ.

೨) ೬-೧೪ ವಯಸ್ಸಿನ ಮಕ್ಕಳಿಗೆ ಸಾರ್ವತ್ರಿಕ ಕಡ್ಡಾಯದ ಶುಲ್ಕರಹಿತ ಪ್ರಾಥಮಿಕ ಶಿಕ್ಷಣ ನೀಡಬೇಕು ಎಂದು ನಮ್ಮ ರಾಜ್ಯಘಟನೆಯ ಕಲಮು ೪೫ ಸಾರುತ್ತಿದೆ. ಯಾವ ರಾಜಕೀಯ ಪಕ್ಷಗಳೂ ಇದನ್ನು ಗಂಭೀರವಾಗಿ ಪರಿಗಣಿಸಿಲ್ಲ. ಆದ್ದರಿಂದ, ಸುಳ್ಳು ಪ್ರಚಾರ, ಅಂಕಿ-ಅಂಶಗಳ ಹಾರಾಟ, ಆತ್ಮಸ್ತುತಿ, ಪರನಿಂದೆ, ಇವೆಲ್ಲ ಸರಕಾರದಿಂದ ನಡೆಯುತ್ತಿವೆ. ಶಿಕ್ಷಣಕ್ಕಾಗಿ, ಒಳ್ಳೆಯ ಶಿಕ್ಷಣಕ್ಕಾಗಿ ಪಾಲಕರಿಗಿರುವ ಆಳವಾದ ಆಸೆಯ ದುರ್ಲಾಭ ಪಡೆದು ಅಂಥವರನ್ನು ಡೊನೇಶನ್ ಹಾವಳಿಗೆ ಒಳಗಾಗಿಸಿ, ಶಿಕ್ಷಣವನ್ನು ವ್ಯಾಪಾರೀಕರಿಸಿ, ಕೊಳ್ಳೆಹೊಡೆಯುವ ಕೆಲಸವನ್ನು ಖಾಸಗಿಸಂಸ್ಥೆಗಳು ಮಾಡುತ್ತಿವೆ. ಸರಕಾರ ಹೇಡಿಯಂತೆ ಕೈಚೆಲ್ಲಿ ತೆಪ್ಪಗಿದೆ. ಅವರಿಗೆ ಇದನ್ನು ತಡೆಯುವ ಮಾರ್ಗಗಳ ಸಲಹೆ ಕೊಡುವವರಿಲ್ಲ; ಕೊಡುವ ಯೋಗ್ಯರನ್ನು ಸರಕಾರ ಕೇಳುವುದಿಲ್ಲ. ಶುಲ್ಕರಹಿತ, ಕಡ್ಡಾಯ ಪ್ರಾಥಮಿಕ ಶಿಕ್ಷಣದ ಬಗ್ಗೆ ಸರಕಾರಕ್ಕೆ ನಿಜವಾದ ಕಳಕಳಿ ಇದ್ದರೆ ಈ ಕೆಳಗಿನ ಕ್ರಮ ಕೈಕೊಳ್ಳಬೇಕು;

೧. ೬-೧೪ ವಯಸ್ಸಿನ ಮಕ್ಕಳು ಸೇರಿದರೆ, ಅದಕ್ಕೆ ಎಷ್ಟು ಬೇಕೋ ಅಷ್ಟು ಶಾಲೆಗಳನ್ನು ಸರಕಾರ ಪ್ರಾರಂಭಿಸಬೇಕು.

೨. ಶುಲ್ಕ ಬೇಡುವ, ಡೊನೇಶನ್ ಬೇಡುವ ಶಾಲೆಗಳಿಗೆ ಅನುಸರಿಸಬೇಕಾದ ಕಾನೂನು ಮಾಡಬೇಕು. ಅದರಲ್ಲಿ ಅಂತಹ ಶಾಲೆ ನಡೆಸುವವರನ್ನು ೬ ತಿಂಗಳು ಜೇಲಿಗೆ ಹಾಕುವ ಶಿಕ್ಷೆಗೆ ಅವಕಾಶವಿರಬೇಕು.

೩. ಪ್ರಾಥಮಿಕ ಹಂತದ ಶಾಲೆಗಳಿಗ (ಖಾಸಗಿ) ಪೂರ್ತಿಯಾಗಿ ಅನುದಾನ ನಿಲ್ಲಿಸಬೇಕು. ಆ ಶಾಲೆಗಳನ್ನು ಸರಕಾರ ಸ್ವಾಧೀನಪಡಿಸಿಕೊಳ್ಳಬೇಕು. ಹೊಸ ಪ್ರಾಥಮಿಕ ಶಾಲೆಗಳನ್ನು (ಅಲ್ಪ ಸಂಖ್ಯಾತರೂ ಸೇರಿದಂತೆ) ತೆರೆಯಲು ಅನುಮತಿಯನ್ನೇ ನೀಡಕೂಡದು. ಇದರಲ್ಲಿ ಪೂರ್ವಪ್ರಾಥಮಿಕ ಹಂತವೂ ಸೇರಿರಬೇಕು.

೪. ಖಾಸಗಿ ಸಂಸ್ಥೆಗಳು ಶುಲ್ಕ, ಡೊನೇಶನ್ ಚಾರ್ಜ್ ಮಾಡಿ, ಪ್ರೌಢಶಾಲೆ, ಕಾಲೇಜುಗಳನ್ನು ನಡೆಸಲು ವಿಧಿಸಿದ ಸ್ಥೂಲ ಚೌಕಟ್ಟಿನಲ್ಲಿ ಮುಕ್ತಾವಕಾಶ ಕೊಡಬೇಕು. ಅಪವಾದವಿಲ್ಲದೆ ಎಲ್ಲವೂ ಅನುದಾನರಹಿತವಾಗಿರಬೇಕು.

೫. ಅಲ್ಪಸಂಖ್ಯಾತರು ರಾಜ್ಯಘಟನೆಯ ಕಲಮು ೨೯ ಮತ್ತು ೩೦ರ ಅಡಿ ತಮ್ಮ ಸಂಸ್ಕೃತಿ ರಕ್ಷಣೆಗೆ, ತಮಗೆ ಬೇಕಾದ ಶಾಲೆ - ಕಾಲೇಜು ತೆಗೆದು ನಡೆಸಿಕೊಂಡು ಹೋಗಲು ವಿಶೇಷಾವಕಾಶವಿದೆ. ಅಲ್ಪಸಂಖ್ಯಾತರೆಂಬ ಆಧಾರದ ಮೇಲ ಅವರಿಗೆ ಅನುದಾನ ನಿರಾಕರಿಸಬಾರದೆಂದಿದೆ. ಆದರೆ, ಶುಲ್ಕ ರಹಿತ, ಸಾರ್ವತ್ರಿಕ, ಕಡ್ಡಾಯ ಪ್ರಾಥಮಿಕ ಶಿಕ್ಷಣದ ಕಾಯ್ದೆ ಮಾಡಿ ಜಾರಿಗೆ ತಂದರೆ ಮತ್ತು ನಾನು ಈ ಮೊದಲೇ ಹೇಳಿದಂತೆ





ಯಾರಿಗೂ ಅನುದಾನ ನೀಡದಿದ್ದರೆ, ಅಲ್ಪಸಂಖ್ಯಾತರ ಸಂಸ್ಥೆಗಳೂ ಶುಲ್ಕರಹಿತ ಪ್ರಾಥಮಿಕ ಶಾಲೆ ನಡೆಸಬಹುದು. ಆದರೆ ಅನುದಾನ ಬೇಡಲಾಗದು. ಈಗ ಸರಕಾರ ಖಾಸಗಿ ಪ್ರಾಥಮಿಕ ಶಿಕ್ಷಣ ಸಂಸ್ಥೆಗಳಿಗೆ ನೀಡುವ ಅನುದಾನ ಹಣದ ಉಳಿತಾಯವಾಗಿ ಅದರಿಂದ ಹೆಚ್ಚು ಹೆಚ್ಚಾಗಿ ಸರಕಾರಿ ಶಾಲೆಗಳನ್ನು ಪ್ರಾರಂಭಿಸಿ, ನಡೆಸಲು ಉಪಯೋಗವಾಗುವುದು.

೬. **ಪ್ರೌಢಶಾಲಾ ಹಂತದ ವಿಚಾರ** : ವರ್ಗ I ರಿಂದ Xರವರೆಗೆ ಶುಲ್ಕರಹಿತ ಶಿಕ್ಷಣ ನೀಡುವ ಯೋಜನೆ ನನ್ನ ದೃಷ್ಟಿಯಲ್ಲಿ ಹುಚ್ಚುತನದ್ದು. ಶುಲ್ಕರಹಿತ ಶಿಕ್ಷಣ ಕೇವಲ ಸರಕಾರಿ ಶಾಲೆಗಳಲ್ಲಿ ಮಾತ್ರ ಎಂದುಕೊಂಡರೆ, ಶುಲ್ಕ, ಡೋನೇಶನ್ ಪಡೆದು, ಮೀಸಲಾತಿ. ನಿಯಮಕ್ಕೊಳಗಾಗದೆ ಕೇವಲ ಗುಣಮಟ್ಟ ಶಿಕ್ಷಣಸೇವೆಗೆ ಅರ್ಪಿತರಾದವರನ್ನು ನೇಮಿಸಿಕೊಂಡು, ಅಂಕೆಯಲ್ಲಿಟ್ಟುಕೊಂಡು ಕಡಿಮೆ ಸಂಬಳದಲ್ಲಿ ಹೆಚ್ಚಿನ ಗುಣಮಟ್ಟದ ಶಾಲೆಗಳನ್ನು ನಡೆಸುವ ಖಾಸಗಿ ಶಾಲೆಗಳೊಡನೆ ಸರಕಾರಿ ಶಾಲೆಗಳನ್ನು ಹೋಲಿಸಿ, ಶೇಕಡಾ ಕಡಿಮೆ ಪ್ರಮಾಣದ ಫಲಿತಾಂಶ ತರುವ ಶಾಲಾ ಶಿಕ್ಷಕರನ್ನು ಶಿಕ್ಷೆಗೆ ಗುರಿಪಡಿಸುವುದು ಆ ರೀತಿ ಧಮಕಿ ಕೊಡುವುದು ಕಾನೂನುಬಾಹಿರ ಮತ್ತು ಸಮರ್ಥನೀಯವಲ್ಲ. ಇಂತಹ ಹುಚ್ಚು ಸಲಹೆಗಳನ್ನು ಸರಕಾರಕ್ಕೆ ಯಾರು ನೀಡುತ್ತಾರೊ ಗೊತ್ತಿಲ್ಲ. ಶಾಸನಬದ್ಧ ಸಮಗ್ರ ಶಿಕ್ಷಣ ಶಾಸನದ ಅಧ್ಯಾಯ ೧೬ರಲ್ಲಿ ಹೇಳಿದ ಸಲಹಾಸಮಿತಿಗಳಿಲ್ಲದಿರುವುದೇ ಈ ಹುಚ್ಚು ಸಾಹಸಗಳಿಗೆ ಕಾರಣ. ಎರಡನೆಯದಾಗಿ ಪ್ರೌಢಶಿಕ್ಷಣವೂ ಶುಲ್ಕರಹಿತವಾಗುವುದೆಂಬ ಧೋರಣೆಯಿಂದ ಎಲ್ಲ ಖಾಸಗೀ ಶಾಲೆಗಳಿಗೂ ಅನುದಾನ ನೀಡಲೇಬೇಕಾದ ಪೇಚಿಗೆ ಕೋರ್ಟು ಸಿಲುಕಿಸಿರುವುದರಿಂದ ಈ ವರ್ಷ ಯಾವ ಖಾಸಗಿ ಶಾಲೆಗೂ ಅನುಮತಿ ನೀಡದಿರುವ chain-reactionಗೆ ಸರಕಾರ ಒಳಗಾಗಿದೆ. ಅನುದಾನ ರಹಿತವಾಗಿ, ಕನ್ನಡ ಮಾಧ್ಯಮದ ಶಾಲೆಗಳನ್ನು ತೆರೆದವರಿಗೂ ಅನುಮತಿ ಇಲ್ಲ. ಇದರಿಂದ ಕನ್ನಡಕ್ಕೆ ಹೊಡೆತ ಬಿದ್ದಿದೆ. ಇದರ ಹೊಣೆಯನ್ನು ಪಾಪವನ್ನು ಸರಕಾರರ ತಪ್ಪಿಸಿಕೊಳ್ಳಲಾಗದು.

***ಪರಿಹಾರವೇನು?***

೧. ಪ್ರೌಢಶಾಲಾ ಹಂತದಲ್ಲಿ ಶುಲ್ಕರಹಿತ ಶಿಕ್ಷಣ ನೀಡುವ ನೀತಿಯನ್ನು ಕೈಬಿಡಬೇಕು.

೨. ಪ್ರೌಢಶಾಲಾ ಹಂತದ ಬಡವಿದ್ಯಾರ್ಥಿಗಳಿಗೆ ಸಾಕಾಗುವಷ್ಟು Freeships ಶುಲ್ಕಮುಕ್ತಿಯನ್ನು ನೀಡಬೇಕು. ಈ freeship ಎಷ್ಟು ಹಣದ್ದಾಗಬೇಕೆಂಬುದನ್ನು ನಿರ್ಧರಿಸಿ, ಎಲ್ಲ ಖಾಸಗಿ ಶಾಲೆಗಳು ಕಡ್ಡಾಯವಾಗಿ ಮಿತಿಗೊಳಪಡುವಂತೆ ಕಾನೂನು ಮಾಡಬೇಕು. ಇದು ಕಾನೂನು ಬದ್ಧವಾಗುವುದು.

೩. ಶಾಲಾಭ್ಯಾಸದ ಗುಣಮಟ್ಟ, ಶಾಲಾಡಳಿತದ ಪರಿಣಾಮಕಾರಿತ್ವ ಈ ಎರಡನ್ನು ಒಳಗೊಂಡ ವಾರ್ಷಿಕ ಶಾಲಾತಪಾಸನೆ, ಮಾರ್ಗದರ್ಶನ ತಪ್ಪದೆ ಸಾಗಬೇಕು.

೪. ತಜ್ಞ ಸಲಹಾ ಮಂಡಳಿ ರಚಿಸಿ, ಅದರ ಸಲಹೆಯನ್ವಯ ಆಡಳಿತ ಸಾಗಬೇಕು.

●

---

**ಭಕ್ತನಾದರೆ ಬಸವಣ್ಣನಂತಾಗಬೇಕು,**
**ಜಂಗಮನಾದರೆ ಪ್ರಭುದೇವನಂತಾಗಬೇಕು,**
**ಯೋಗಿಯಾದರೆ ಸಿದ್ಧರಾಮನಂತಾಗಬೇಕು,**
**ಭೋಗಿಯಾದರೆ ಚೆನ್ನಬಸವಣ್ಣನಂತಾಗಬೇಕು,**
**ಐಕ್ಯನಾದರೆ ನಮ್ಮ ಅಜಗಣ್ಣನಂತಾಗಬೇಕು,**
**ಇಂತೀ ಐವರ ಕಾರುಣ್ಯಪ್ರಸಾದವ ಕೊಂಡು**
**ಸತ್ತಹಾಗಿರಬೇಕಲ್ಲದೆ ತತ್ತ್ವದ ಮಾತು ನಮಗೇಕಯ್ಯ**
**ದಾಸಯ್ಯಪ್ರಿಯ ರಾಮನಾಥ?**

**- ದುಗ್ಗಳೆ**

**ಭಕ್ತಿಯೆಂಬ ಪೃಥ್ವಿಯ ಮೇಲೆ, ಗುರುವೆಂಬ ಬೀಜವಂಕುರಿಸಿ,**
**ಲಿಂಗವೆಂಬ ಎಲೆಯಾಯಿತ್ತು,**
**ಲಿಂಗವೆಂಬ ಎಲೆಯ ಮೇಲೆ,**
**ವಿಚಾರವೆಂಬ ಹೂವಾಯಿತ್ತು,**
**ಆಚಾರವೆಂಬ ಕಾಯಾಯಿತ್ತು,**
**ನಿಷ್ಪತ್ತಿಯೆಂಬ ಹಣ್ಣಾಯಿತ್ತು,**
**ನಿಷ್ಪತ್ತಿಯೆಂಬ ಆ ಹಣ್ಣು ತೊಟ್ಟು ಕಳಚಿ ಬೀಳುವಲ್ಲಿ,**
**ಕೂಡಲಸಂಗಮದೇವ ತನಗೆ ಬೇಕೆಂದೆತ್ತಿಕೊಂಡ.**

**- ಬಸವಣ್ಣ**

# ಶಿವಪಂಚಾಕ್ಷರೀ ಮಂತ್ರದ ಮಹಿಮೆ

- ಮು.ನಾ. ಲಕ್ಷ್ಮೀನರಸಿಂಹಭಟ್ಟ

ಭಗವಂತನನ್ನು ದೃಢರಾಗಿ ನಂಬಿದವನಿಗೆ ಎಷ್ಟೇ ಕಷ್ಟ-ನಿಷ್ಠುರಗಳು ಒದಗಿದರೂ ಕೊನೆಗೆ ಬಿಸಿಲಿಗೆ ಮಂಜು ಕರಗಿದಂತೆ ಅವು ದೂರವಾಗಿ, ಭಕ್ತನನ್ನು ಆನಂದಸಾಗರದಲ್ಲಿ ಮುಳುಗುವಂತೆ ಭಗವಂತನು ಮಾಡುತ್ತಾನೆ. ಇದಕ್ಕೆ ಪ್ರತ್ಯಕ್ಷ ಅನುಭವದ ಘಟನೆಯೊಂದನ್ನು ನೋಡೋಣ. ರಾಮನಾರಾಯಣ ಶ್ರೀವಾಸ್ತವ ಎಂಬ ಸಜ್ಜನರೊಬ್ಬರು (ಉತ್ತರ ಭಾರತದವರು) ತಮ್ಮ ಅನುಭವವನ್ನು 'ಕಲ್ಯಾಣ್' ಎಂಬ ಹಿಂದಿ ಮಾಸಪತ್ರಿಕೆಯಲ್ಲಿ ನಿರೂಪಣೆ ಮಾಡಿದ್ದಾರೆ. ಅದರ ಸಾರಾಂಶ ಹೀಗಿದೆ :

ಅವರ ಪತ್ನಿಯು ಮೂರನೆಯ ಮಗುವನ್ನು ಪ್ರಸವಿಸಿ ಮೊದಲ ದಿನ ಸುಖವಾಗಿದ್ದು, ಎರಡನೆಯ ದಿನದಲ್ಲಿ ಅವರಿಗೆ ಪಕ್ಕೆಲುಬಿನಲ್ಲಿ ನೋವು ಕಾಣಿಸಿಕೊಂಡು ತೀವ್ರವಾಗುತ್ತಾ ಹೋಗಿ ಸ್ಥಳೀಯ ವೈದ್ಯಶಾಲೆಯ ವೈದ್ಯರಿಂದ ಏನೂ ಅನುಕೂಲವಾಗಲಿಲ್ಲ. ಹೀಗೆಯೇ ಮೂರುದಿನ ಕಳೆಯಿತು. ಮನೆಮಂದಿಯೆಲ್ಲಾ ಗಾಬರಿಗೊಂಡಿದ್ದಲ್ಲದೆ ಮಗು, ಬಾಣಂತಿ ಇಬ್ಬರೂ ಉಳಿಯಲಾರರು ಎಂಬ ಸಂದೇಹವುಂಟಾಗಿ ಅವರೆಲ್ಲಾ ದುಃಖಸಾಗರದಲ್ಲಿ ಮುಳುಗಿದದರು. ಮೂರನೇ ದಿನ ಅವರ ಗೆಳೆಯರ ಸಲಹೆಯಂತೆ ಝಾಂಸಿಯ ಆಸ್ಪತ್ರೆಗೆ ಹೋಗಲು ತೀರ್ಮಾನಿಸಿದರು. ಆದರೆ ಆ ಹೊತ್ತಿಗಾಗಲೇ ರಾತ್ರಿಯಾಗಿದ್ದಿತು. ಆ ವೇಳೆಯಲ್ಲಿ ವಾಹನ ಸಂಚಾರವಿಲ್ಲದೆ ಪ್ರಯಾಣಕ್ಕೆ ಕಷ್ಟವಾಯಿತು. ಆಗ ದೈವವಶಾತ್ ಆ ಪ್ರದೇಶದ ಬಿ.ಡಿ.ಓ. ಸಾಹೇಬರು ಉದಾರಭಾವದಿಂದ ತಮ್ಮ ಜೀಪ್‌ನಲ್ಲಿ ಇವರನ್ನು ಕರೆದುಕೊಂಡು ಸ್ವಲ್ಪ ದೂರದಲ್ಲಿದ್ದ ಬಿರಗಾವ್ ಎಂಬ ಊರಿಗೆ ತಲುಪಿಸಿ ಅವರು ಮುನ್ನಡೆಯಲನುವಾದಾಗ ಡ್ರೈವರನ್ನು ಕೇಳಿಕೊಂಡದ್ದಕ್ಕೆ ಅಲ್ಲಿಂದ ಮುಂದಿದ್ದ ಕಾನ್‌ಪುರ-ಝಾಂಸಿ ಮಾರ್ಗದಲ್ಲಿ ನಿರ್ಜನ ಪ್ರದೇಶದಲ್ಲಿ ಇವರನ್ನಿಳಿಸಿದನು. ಆಗ ರಾತ್ರಿ ಹನ್ನೆರಡು ಗಂಟೆಯಾಗಿತ್ತು. ಆ ಅವೇಳೆಯಲ್ಲಿ ಬೇರಾವ ವಾಹನದ ಸಂಭವವೂ ಇರಲಿಲ್ಲ. ಎಲ್ಲರೂ ಬದುಕುಳಿಯುವ ಆಸೆಯನ್ನೇ ಬಿಡುವಂತಾಗಿತ್ತು. ಬಾಣಂತಿಯು ಎಚ್ಚರತಪ್ಪಿದ್ದಳು. ಮಗುವು ಆಹಾರವಿಲ್ಲದೆ ಸುಸ್ತಾಗಿದ್ದಿತು. ಈ ಸಂಕಟದ ವೇಳೆಯಲ್ಲಿ ಭಗವಂತನನ್ನು ಬಿಟ್ಟು ಬೇರಾರೂ ರಕ್ಷಕರಿರಲಿಲ್ಲ. ಎಲ್ಲರೂ ಹರಿನಾಮದ ಜಪ ಮಾಡಲು ಆರಂಭಿಸಿದರು. ಯಜಮಾನರು ಶಿವಪಂಚಾಕ್ಷರೀ ಮಂತ್ರದ ಮೇಲಿನ ಭಕ್ತಿಭಾವವುಳ್ಳವರಾಗಿದ್ದು ಅದನ್ನೇ ತನ್ಮಯತೆಯಿಂದ ಜಪ ಮಾಡುತ್ತಾ ಮೈಮರೆತರು.

ದೈವಲೀಲೆ; ಅದೇ ಸಮಯಕ್ಕೆ ಒಂದು ಅನಿರೀಕ್ಷಿತ ಘಟನೆ ಆಯಿತು. ಒಂದು ಜೀಪು ಹಿಂದಕ್ಕೆ ಚಿಕ್ಕ ಟ್ರಾಲಿಯೊಂದನ್ನು ಲಗತ್ತಿಸಿಕೊಂಡು ಕಾನ್‌ಪುರದಿಂದ ಬರುತ್ತಿದ್ದಿತು. ಜೀಪಿನಲ್ಲಿ ಕೇವಲ ಡ್ರೈವರು ಮತ್ತು ಇನ್ನೊಬ್ಬ ಸಜ್ಜನರು ಇವರಿಬ್ಬರು ಇದ್ದರು. ಜೀಪನ್ನು ನಿಲ್ಲಿಸಲು ಇವರುಗಳು ಎಷ್ಟೇ ಪ್ರಯತ್ನ ಮಾಡಿದರೂ ಅದು ನಿಲ್ಲದೆ ಮುನ್ನಡೆಯಿತು. ಆದರೆ ನಂತರ ಒಂದೆರಡು ನಿಮಿಷದಲ್ಲೇ ಆ ಜೀಪು ಹಿಂದಕ್ಕೆ ಬಂದಿತು. ಮತ್ತು ಅದರಲ್ಲಿದ್ದ ಸಜ್ಜನರ ಅಣತಿಯಂತೆ ಚಾಲಕನು ಇವರೆಲ್ಲರನ್ನೂ ಅದರಲ್ಲಿ ಕುಳ್ಳಿರಿಸಿಕೊಂಡನು. ಅವಸರವಸರದಲ್ಲಿ ಇವರು ತಮ್ಮ ಸಾಮಾನುಗಳನ್ನು ಅದರೊಳಗೆ ಹಾಕಿಕೊಂಡರು. ಕೂಡಲೇ ಅದು ಝಾಂಸಿಯ ಕಡೆ ಚಲಿಸಿತು. ಅನಂತರ ಕೇವಲ ಅರ್ಧ ತಾಸಿನಲ್ಲಿಯೇ ಜೀಪು ಆಸ್ಪತ್ರೆಯ ಮುಂದೆ ನಿಂತಿತು. ಕೂಡಲೇ ಜೀಪಿನಲ್ಲಿದ್ದ ಸಜ್ಜನರು ಆಸ್ಪತ್ರೆಯ ಗೇಟನ್ನು ತೆಗೆಸಿ, ಒಳಗೆ ಬಾಣಂತಿಯನ್ನು ಕರೆದುಕೊಂಡು ಹೋಗಲು ಏರ್ಪಾಡು ಮಾಡಿ, ಎಮರ್ಜೆನ್ಸಿ ವಾರ್ಡಿನಲ್ಲಿ ದಾಖಲು ಮಾಡಿಸಿದರಲ್ಲದೆ ಪಾಳಿಯಲ್ಲಿದ್ದ ವೈದ್ಯರಿಗೆ ಅಪ್ಪಣೆ ಮಾಡುವ ರೀತಿಯಲ್ಲಿ ಹೇಳಿದರು. ಕೂಡಲೇ ಚಿಕಿತ್ಸೆ ಶುರುವಾಯಿತು. ಇಷ್ಟು ವ್ಯವಸ್ಥೆ ಮಾಡಿದ ಸಜ್ಜನರು ಅಲ್ಲಿಂದ ಹೊರಡಲನುವಾದಾಗ ರೋಗಿಯ ಕಡೆಯ ಯಜಮಾನರು ಅವರ ವಿಳಾಸವನ್ನು ಕೇಳಲು ಅವರು ಹೇಳಲಿಲ್ಲ, ಮಾತ್ರವಲ್ಲ ಜೀಪಿನಲ್ಲಿ ಕರೆದುಕೊಂಡು ಬಂದುದರ ಶುಲ್ಕವಾಗಿ ಹಣವನ್ನು ಕೊಡಲು ಅದನ್ನೂ ಸ್ವೀಕರಿಸಲಿಲ್ಲ. ಉತ್ತರವಾಗಿ ಇವರನ್ನು ಕುರಿತು, "ಈಗ ಏನು ಘಟಿಸಿ ನಡೆದಿದೆಯೋ ಅದೆಲ್ಲ ಭಗವಂತನ ಅಪ್ಪಣೆಯಿಂದ ನಡೆದದ್ದು" ಎಂದು ಮಾತ್ರ ಹೇಳುತ್ತಾ ಅಲ್ಲಿಂದ ಹೊರಟೇ ಹೋದರು. ಒಂದು ಗಂಟೆ ಅವಧಿಯ ತೀವ್ರ ಚಿಕಿತ್ಸೆಯ ಪರಿಣಾಮ ಒಳ್ಳೆಯದಾಗಿತ್ತು. ನರ್ಸ್ ಬಂದು "ರೋಗಿಯ ಸ್ಥಿತಿ ಉತ್ತಮವಾಗಿದೆ" ಎಂದು ಹೇಳಿದಾಗ ಇವರಿಗೆಲ್ಲ ಜೀವ ಪುನಃ ಬಂದಂತಾಯಿತು. ಆ ಸಂದರ್ಭದಲ್ಲಿ ಇವರುಗಳು ಇದೆಲ್ಲ ಪರಮಾತ್ಮನೇ ಮಾಡಿದ ಚಮತ್ಕಾರ ಎಂದು ಭಾವಿಸಿದರು. 'ಈ ಕಲಿಗಾಲದಲ್ಲೂ ಇಂತಹ ಮಹಾತ್ಮರು ಇದ್ದಾರಲ್ಲ, ಇವರ ಮೂಲಕ ಭಗವಂತನೇ ಬಂದು ಇಂತಹ ಅದ್ಭುತ ಕಾರ್ಯವನ್ನು ನಿರ್ವಹಿಸುತ್ತಾನೆ' ಎಂಬ ಅನುಭವ ಇವರಿಗೆ ಬಂದಿತು. ಅಂದಿನಿಂದ (ಈ ಘಟನೆಯಾದಂದಿನಿಂದ)ಈ ಕುಟುಂಬದ ಯಜಮಾನರಿಗೆ ಭಗವಾನ್ ಶಂಕರನಲ್ಲಿ ಅಪಾರ ಶ್ರದ್ಧೆ ಮೂಡಿಬಂಧು ನಂತರ ಇವರು ಈ ಪಂಚಾಕ್ಷರೀ ಮಂತ್ರವನ್ನು ತಮ್ಮ ಜೀವನದಲ್ಲಿ ಪ್ರಾಣಕ್ಕಿಂತಲೂ ಮಿಗಿಲಾದ ಘನವಾಗಿ ಮಾಡಿಕೊಂಡರು. ಈಗ "ಭಗವಂತನ ಕೃಪೆಯಿಂದ" ನಾವೆಲ್ಲ ಸುಖವಾಗಿದ್ದೇವೆ ಎಂದು ಇವರು ಹೇಳುತ್ತಾರೆ.

(ಕಲ್ಯಾಣ್ : ಸಂಚಿಕೆ - ೧೨, ೧೯೭೬)





# ಶರಣೆ ಅಮುಗೆ ರಾಯಮ್ಮ

- ಪ್ರೇಮಾ ಪ್ರಭು ನಡಕಟ್ಟಿ
ಮೃತ್ಯುಂಜಯನಗರ,
ಧಾರವಾಡ-6

ಹನ್ನೆರಡನೆಯ ಶತಮಾನದಲ್ಲಿ ಸ್ತ್ರೀ-ಪುರುಷರು ಎಲ್ಲಾ ರಂಗಗಳಲ್ಲಿಯೂ ಸರ್ವಸಮಾನತೆಯನ್ನು ಪಡೆದಿದ್ದರು. ಅಂತಹ ಅನೇಕ ಸ್ತ್ರೀಯರಲ್ಲಿ ಅಮುಗೆ ರಾಯಮ್ಮಳೂ ಒಬ್ಬಳು. ಇವಳ ಉದ್ಯೋಗ ಕಂಬಳಿ ನೇಯುವುದು. ಅದರಿಂದ ಬಂದ ಹಣದಿಂದ ಜಂಗಮ ದಾಸೋಹ ನಡೆಸಿ ಉಳಿದದ್ದನ್ನು ಪ್ರಸಾದವೆಂದು ಸೇವಿಸುತ್ತಿದ್ದಳು. ಲಿಂಗಪ್ರಾಣಿಯಾಗಿದ್ದ ಆಕೆಗೆ ಅವಳ ಎಲ್ಲ ಕ್ರಿಯೆಗಳು ಲಿಂಗಪೂಜೆಯೇ ಆಗಿದ್ದವು. ಆ ಶರಣೆಯ ಕಾಯಕದ ಜೊತೆಗೆ ಆಕೆಯ ಅಂತರಂಗದ ಕಾಯಕದ ಅರಿವು ನಮಗಾಗುತ್ತದೆ. ಸಾಮಾನ್ಯಹೆಣ್ಣು ಮಗಳು ಇಂತಹ ಔನತ್ಯದ ವ್ಯಕ್ತಿತ್ವ ಹೊಂದಿದ್ದಳೆಂಬುದನ್ನು ಗಮನಿಸಿದರೆ ಬಸವಣ್ಣನವರ ಕಾಲದಲ್ಲಿ ಮಹಿಳೆಯರು ಶಿವಾನುಭವದಲ್ಲಿ ಎಷ್ಟು ಎತ್ತರಕ್ಕೆ ತಲುಪಿದ್ದರೆಂಬುದು ತಿಳಿಯುವುದು.

ಕೀಳುವರ್ಗದ ಮಹಿಳಾ ಕುಲಕ್ಕೆ ಅರುಹಿನ ಕುರುಹು ಕೊಟ್ಟು ಅವರನ್ನೆಲ್ಲಾ ಲಿಂಗದ ಅಡಿಯಲ್ಲಿ ಒಂದುಗೂಡಿಸಿದರು. ಬಸವಾದಿ ಶರಣರು ಸಾಧಿಸಿದ ಬಹುಮುಖ್ಯ ಸಾಧನೆ, ಪ್ರತಿಯೊಂದು ಹಂತದಲ್ಲಿ ಸಮಾಜದ ಲೋಪದೋಷಗಳನ್ನು ವಿಮರ್ಶಿಸುವ ಯೋಗ್ಯತೆಯನ್ನು ಇವರು ಬೆಳೆಸಿಕೊಂಡುದುದು ಗಣನೀಯ.

ಅಮುಗೆ ರಾಯಮ್ಮ ನಿರವಯ ಸ್ಥಲದಲ್ಲಿ ನಿಂತು ಅರಿವನ್ನು ಸಾಧಿಸಿಕೊಂಡ ಮಹಿಳೆ. ತನ್ನ ತಾನು ಅರಿದವಂಗೆ ಏಣಲಕನ ಶರಣರ ಸಂಗವೇಕೆ? ಎನ್ನುವ ಮಟ್ಟಿಗೆ ಸಾಧನೆ ಮಾಡಿದವಳು. ವೇಷಧಾರಿ ವಿರಕ್ತರನ್ನು ಕಂಡರೆ ಅವಳಿಗಾಗದು. ಒಂಟಿ ವಸ್ತ್ರವನ್ನು ಧರಿಸಿ ಲಿಂಗಧಾರಿಯಾಗಿ ಒಬ್ಬಂಟಿಗನಾಗಿ ತಿರುಗುವವನು ನಿಜವಾದ ವಿರಕ್ತ ಎಂದಿದ್ದಾಳೆ. ಜ್ಞಾನವೆಂಬುದು ಬೀದಿಯ ಪ್ರಸಾವೆ? ಬೊಕ್ಕಣಕ್ಕೆ ತುಂಬುವ ಹುರುಳಿಯೇ? ಎಂದ ಅವಳು ಜ್ಞಾನವೆಂಬುದನ್ನು ಎಲ್ಲರೊಡನೆ ಬೀರದಿರಬೇಕು. ಹಾಗೇ ಬೀರುವ ಠಕ್ಕ ವಿರಕ್ತರನ್ನು ಅತ್ತೆಯ ಹೆಸರ ಹೇಳಿ ಹೊಟ್ಟೆ ಹೊರೆಯುವ ತೊತ್ತಿನಂತೆ ಎಂದು ಜರಿದಿದ್ದಾಳೆ. ಭಕ್ತಿ, ಜ್ಞಾನ, ವೈರಾಗ್ಯಗಳು ಪ್ರಸಾರದಿಂದ ಅಳವಡದೆ ಸ್ವತಃ ಅರಿವಿನಿಂದ ವೇದ್ಯವಾಗುತ್ತದೆ ಎನ್ನುತ್ತಾಳೆ.

**"ಅರಿವುಳ್ಳವರಿಗೆ ಗುರುವಿನ ಹಂಗೇಕೆ?**
**ಅರಿವುಳ್ಳವರಿಗೆ ಲಿಂಗದ ಹಂಗೇಕೆ?**
**ಅರಿವುಳ್ಳವರಿಗೆ ಜಂಗಮದ ಹಂಗೇಕೆ?**
**ಅರಿವುಳ್ಳವರಿಗೆ ಪಾದೋದಕದ ಪ್ರಸಾದದ ಹಂಗೇಕೆ?**
**ಅರಿವುಳ್ಳವರಿಗೆ ಅಮುಗೇಶ್ವರ ಲಿಂಗ ಏನರಿವನೆಂಬ ಸಂದೇಹವೇಕೆ?"**

ರಾಯಮ್ಮ ನಿಷ್ಠುರವಾದಿ, ತಾವು ಜ್ಞಾನಿಗಳೆಂದು ತಿರುಗುವ ವೇಷಧಾರಿ ವಿರಕ್ತರನ್ನು ಆಕೆ ವಿಶೇಷವಾಗಿ ಟೀಕಿಸಿದ್ದಾಳೆ. ಈ ಸಂದರ್ಭದಲ್ಲಿ ಆಕೆ ಬಳಸುವ ಮಾತುಗಳು ಚಾಟಿ ಏಟಿನಂತೆ ಚುರುಕು ಮುಟ್ಟಿಸುವಂತಹವು. ಇವು ಆಕೆ ವಿರಕ್ತರನ್ನು ಕುರಿತು ವ್ಯಕ್ತಪಡಿಸಿದ ಅಭಿಪ್ರಾಯ. ದೇಶ ದೇಶವ ತಿರುಗಿ ಮಾತುಗಳ ಕಲಿತು ಗ್ರಾಸಕ್ಕೆ ತಿರುಗುವ ದಾಸಿವೇಶಿಯ ಮಕ್ಕಳ ವಿರಕ್ತರೆಂಬೆನೆ, ನಿಜವನರಿದ ವಿರಕ್ತನು ನಿಜಾನುಭಾವಿಯೆಂದು ನುಡಿವನೆ? ಹಾಗಾದರೆ ವಿರಕ್ತನ ಲಕ್ಷಣವೇನು? ವಿರಕ್ತನಾದ ಬಳಿಕ ವಿಷಯಕ್ಕೆ ದೂರನಾಗಿರಬೇಕು. "ಒಣಗಿದ ಮರನ ವಾಯು ಅಪ್ಪಿದಂತಿರಬೇಕು." "ಸಮುದ್ರ ದೊಳಗೆ ತರುಗಿರಿಗಳು ಮುಳುಗಿದಂತಿರಬೇಕು." "ಮೂಕ ಕಂಡ ಕನಸಿನಂತಿರಬೇಕು." ಅಂಥವರನ್ನು ವಿರಕ್ತನೆಂಬೆ ಎನ್ನುತ್ತಾಳೆ.

ಅಜ್ಞಾನಿಗಳನ್ನು ಕುರಿತು ಕುಂಜರದ ವೇಷವ ತೊಟ್ಟು ಹಂದಿಯಂತೆ ತಿರುಗವ ಅಜ್ಞಾನಿಗಳನೇನೆಂಬೆನಯ್ಯಾ ಎಂದು ಪ್ರಶ್ನಿಸಿ ಜ್ಞಾನಿಯಾದವನು "ಕತ್ತಲೆಯ ಮನೆಯಲ್ಲಿ ಸಕ್ಕರೆಯ ಸವಿದವನಂತಿರಬೇಕು" ಎನ್ನುತ್ತಾಳೆ.

ವಿಡಂಬನೆಯೇ ರಾಯಮ್ಮನ ವಚನಗಳ ಮೂಲ ಆಶಯವಾಗಿರುವುದರಿಂದ ಮೃದು ಮಧುರ ಭಾವನೆಗಳನ್ನೊಳಗೊಂಡ ಸಾಹಿತ್ಯಿಕ ಅಭಿವ್ಯಕ್ತಿ ಗೌಣವಾಗಿ, ಕಠೋಕ್ತಿ, ವ್ಯಂಗ್ಯೋಕ್ತಿಗಳಿಗೇ ಅಗ್ರಸ್ಥಾನ ಸಂದಿದೆ. ಅವಳು ಬಳಸುವ ಕೆಲವು ಪ್ರಾಸಬದ್ಧ ಸೂಕ್ತಿಗಳು, ಗಾದೆ ಮಾತುಗಳು, ನುಡಿಗಟ್ಟುಗಳು, ವಚನಗಳಿಗೆ ಧ್ವನಿಪೂರ್ಣತೆಯನ್ನು ವಿಶೇಷ ಸತ್ವವನ್ನು ತಂದುಕೊಟ್ಟಿವೆ. ಉದಾ. ಕಾದ ಹಾಲ ನೊಣ ಮುಟ್ಟಬಹುದೇ?

ಆಕಾಶಕ್ಕೆ ಹಾರುವವಂಗೆ ದೋಟಿಯ ಕೋಲ ಹಂಗೇಕಯ್ಯಾ? ಕಾಗೆ ಮರಿ ಕೋಗಿಲೆಯಾಗಬಲ್ಲುದೆ? ಆಡಿನ ಮರಿ ಆನೆಯಾಗ ಬಲ್ಲದೇ? ಹೀಗೆ ರಾಯಮ್ಮಳ ವಚನಗಳು ಅವಳ ವಿಶೇಷ ವೆನಿಸಿದ ಕೆಚ್ಚು, ಧೈರ್ಯ, ಛಲ, ನಿಷ್ಠುರತೆಗಳನ್ನು ಹೆಚ್ಚಾಗಿ ಮೈಗೂಡಿಸಿಕೊಂಡು ಶರಣೆಯರ ವಚನಗಳಲ್ಲಿ ಪ್ರತ್ಯೇಕತೆಯನ್ನು ಮೆರೆಯುತ್ತದೆ. ಹೀಗಾಗಿ ಅವಳ ಭಾಷೆಯ ಒರಟುತನವೇ ಅವಳ ಅಭಿವ್ಯಕ್ತಿಗೆ ನಾವೀನ್ಯತೆಯನ್ನು ತರುತ್ತವೆ ಎಂಬ ಡಾ. ಚಿದಾನಂದ ಮೂರ್ತಿಯವರ ಮಾತು ಅರ್ಥಪೂರ್ಣವೆನಿಸಿದೆ.

**ಡಾ. ಸಿದ್ಧಯ್ಯ ಪುರಾಣಿಕರವರು ಹೇಳುವಂತೆ ರಾಯಮ್ಮಳ ನುಡಿಗಳು ಅವಳ ಅಂತರಂಗದ ಕಿಡಿಗಳು, ಜ್ಞಾನದ ಮಾತನಾಡುವ ಅಜ್ಞಾನಿಗಳನ್ನು ಕಂಡರೆ ಆಕೆಗೆ ಆಗದು, ಎಷ್ಟು ಸುಲಭವಾಗಿ ಜ್ಞಾನದ ಮಾತೆತ್ತುವವರಲ್ಲ? "ಜ್ಞಾನವೆಂಬುದು ಬೀದಿಯ ಪ್ರಸಾರವೆ? ಬೊಕ್ಕಣದೊಳಗಣ ಹುರುಳಿಯೇ? ಚೀಲದೊಳಗಣ ಜೀರಿಗಿಯೇ? ಗಾನದೊಳಗಣ ಹಿಂಡಿಯೇ? ಜ್ಞಾನವೆಂಬುದು ಎಲ್ಲರೊಡನೆ ಬೀರದಿರಬೇಕು. ಗೆಲ್ಲ ಸೋಲಿನ ಮಾತು ಬಂದರೆ ಗೆಲವ ನುಡಿಯದಿರಬೇಕು. ಹೀಗಿರಬಲ್ಲಡೆ ಶರಣನೆಂಬೆನು, ಅಮುಗೇಶ್ವರ ಲಿಂಗವೆಂಬೆನು."**

ಗೆಲವ ನುಡಿಯದಿರಬೇಕು. ಸೋಲನ್ನೆ ಗೆಲವೆಂದು ಭ್ರಮಿಸಿ ನುಡಿದು ಪರಿಭ್ರಮಣಕ್ಕೊಳಗಾದವರೇ ಹೆಚ್ಚು, ಈ ಹುಚ್ಚು ಜಗತ್ತಿನಲ್ಲಿ ಎಂದಿದ್ದಾರೆ. ನಿಜವಾಗಿ ನೋಡಿದರೆ ಸೋತವನೆ ಗೆದ್ದ, ಗೆದ್ದವನೇ ಸೋತ, ಗೆಲವ ನುಡಿವುದು ಗರ್ವದ ಗುಣ. ಗರ್ವವಿದ್ದಲ್ಲಿ ಶರ್ವನಿಲ್ಲ, ಶಿವನೊಲಿಯದೆ ಶರಣ ಹೇಗಾಗುವ? ಇನ್ನೊಂದು ಅಮೃತ ವಚನ. ಲಿಂಗಕ್ಕೆ ಆಚಾರ, ಮನಕ್ಕೆ ಜ್ಞಾನ, ಸಮರಸಾದ್ವೈವಾದ ಮತ್ತೆ ಪುನರ್‌ವೀಕ್ಷೆಯುಂಟೆ? ಗಾರುಡಿಯಲ್ಲಿ ಕೋಲಲ್ಲವೇ ಕಾಳಗದಲ್ಲಿ ಉಂಟೆ ಕೋಲು?

ರಾಯಮ್ಮ ನಿಜವಾಗಿ ಅನುಭವದ ತಾಯಮ್ಮ ವಿಶ್ವಮಯರೂಪವಾಗಿ ಬಂದೆಯ್ಯಾ ಎಂದು ಆಕೆ ಗುರುವಿನ ಬರವನ್ನು ವರ್ಣಿಸುವಾಗ ಆಕೆಗೆ ಶಿವನ ವಿಶ್ವರೂಪ ದರ್ಶನ ವಾಗಿರಬೇಕೆಂದು ಒಪ್ಪಲೇಬೇಕಾಗುತ್ತದೆ. ಒಟ್ಟಿನಲ್ಲಿ ರಾಯಮ್ಮ-ಮಂಚಣ್ಣ ದಂಪತಿಗಳ ಬಾಳು ಇಂಗಾಳಿನ ಬಾಳು. ಜೀವಿಸಲು ಬೀಜ ಸಾವಂತೆ, ಇವರಿಬ್ಬರೂ ಕಲ್ಯಾಣದಲ್ಲಿ ಕೆಲಕಾಲ ಬಾಳಿ ಬಯಲಾದರು. ಆದರೆ ಆ ಬೀಜ ಮಣ್ಣಾಗಿ ಅಮರ ಜೀವನವಾಗಿ ಅಂಕುರಿಸಿದೆ, ಅದು ಎಂದೆಂದೂ ಕಮರದ ಅಮೃತದ ಅಂಕುರವಾಗಿದೆ.

ರಾಯಮ್ಮಳ ಕೆಲವು ಸೊಗಸಾದ ವಚನಗಳು ಇಂತಿವೆ.

**"ಹೊನ್ನು ಬಿಟ್ಟಡೇನು, ಹೆಣ್ಣು ಬಿಟ್ಟಡೇನು, ಮಣ್ಣ ಬಿಟ್ಟಡೇನು, ವಿರಕ್ತನಾಗಬಲ್ಲನೇ? ಆದ್ಯರ ವಚನಂಗಳ ಹತ್ತು ಸಾವಿರ ಲೆಕ್ಕವಿಲ್ಲದೆ ಓದಿದಡೇನು, ನಿತ್ಯರಾಗಬಲ್ಲರೆ? ಮಂಡೆಯ ಬೋಳಿಸಿಕೊಂಡು ಅಂದ ಚಂದಕೆ ತಿರುಗುವ ಜಗಭಂಡರ ಮೆಚ್ಚುವನೆ ಅಮುಗೇಶ್ವರ ಲಿಂಗವು?"**

**"ಶೀಲವಂತನಾದೊಡೆ ಜಾತಿಯ ಬಿಡಬೇಕು, ಶಿವಜ್ಞಾನಿಯಾದೊಡೆ ಸಮಯವ ಬಿಡಬೇಕು. ಹೀಗಲ್ಲದೆ ಜಗದಲ್ಲಿ ನಡೆವ ಭ್ರಾಂತರ ಸುದ್ದಿಯೇಕೆ, ನಿಭ್ರಾಂತನಾದ ಶರಣಂಗೆ ಅಮುಗೇಶ್ವರಾ?"** ಇಂಥ ಇನ್ನೂ ಅನೇಕ ಅರ್ಥಪೂರ್ಣ ಸರಳ, ಸುಲಭವಾದ ವಚನಗಳಿವೆ, ಹೀಗೆ ಜನವಾಣಿಯನ್ನು ದೇವ ವಾಣಿಯ ಮಟ್ಟಕ್ಕೇರಿಸಿದ ಶ್ರೇಯಸ್ಸು ಶರಣೆಯರದು. ಇಂಥ ವ್ಯಾಪಕವಾದ ಕ್ರಾಂತಿಯನ್ನು ಕೈಕೊಂಡು ಅಜ್ಞಾನದಲ್ಲಿ ಮಲಗಿದ ಮಹಿಳಾ ಕುಲಕ್ಕೆ ಚೇತನವನ್ನು ದೊರಕಿಸಿಕೊಟ್ಟ ಬಸವಣ್ಣನವರು ಕೇವಲ ಸಾಮಾಜಿಕ ಸ್ಥಾನಮಾನ ಮಾತ್ರವಲ್ಲ ಪಾರಮಾರ್ಥಿಕ ವಿಚಾರದಲ್ಲಿಯೂ ಅವರನ್ನು ತೊಡಗಿಸಿದುದು ಒಂದು ಹೊಸತಿರುವು. ಇದರ ಪರಿಣಾಮವಾಗಿ ಜಾಗತಿಕ ಇತಿಹಾಸ ದಲ್ಲಿಯೇ ಶಿವಶರಣೆ ಯರಿಗೆ ಒಂದು ವಿಶಿಷ್ಟ ಸ್ಥಾನ ದೊರೆತು ದುದು. ಹೀಗೆ ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯ ವಾಗಿ ಹೊಸ ಮಾರ್ಗದರ್ಶನವನ್ನು ರೂಪಿಸಿಕೊಟ್ಟ ಸಮಸ್ತ ಮಹಿಳಾ ಕುಲಕ್ಕೆ ಮಾರ್ಗದರ್ಶಕರಾದರು ಶಿವಶರಣೆಯರು. ಇವರು ಕೇವಲ ಉಪದೇಶಾತ್ಮಕ ವೈಚಾರಿಕ ಧೋರಣೆಗಳನ್ನು ಪ್ರಕಟಿಸಿ ತೃಪ್ತರಾಗದೆ ನಡೆನುಡಿಗಳಲ್ಲಿ ಸಾಮರಸ್ಯ ಸಾಧಿಸಿ ಆದರ್ಶ ಜೀವನ ನಡೆಸಿದರು. ಅರಿವಿನ ಜೀವನ ಸಾಧಿಸಿ ಸಾಧನೆಯ ಮಾರ್ಗದಲ್ಲಿ ತಾವು ಪತಿಗಳಿಗೆ ತಕ್ಕ ಮಾರ್ಗದರ್ಶನ ಮಾಡಿದ್ದಲ್ಲದೆ ತಮ್ಮ ಸುತ್ತಲಿನ ಸಮಾಜವನ್ನು ಮೇಲೆತ್ತಲು ಪ್ರಯತ್ನಿಸಿದವರು ಶಿವಶರಣೆಯರು. ಜಗತ್ತಿನಲ್ಲಿ ಯಾವುದೇ ಮಹತ್ವ ಪಡೆದ ವ್ಯಕ್ತಿಯ ಹಿಂದೆ ಒಂದು ಹೆಣ್ಣಿನ ಯೋಗ್ಯ ಮಾರ್ಗದರ್ಶನ ಇದೆ ಎಂಬ ಮಾತನ್ನು ಮರೆಯಲಾಗದು.

ಅಮುಗೆ ರಾಯಮ್ಮಳ ವೈಯಕ್ತಿಕ ಜೀವನ ಚರಿತ್ರೆ ಹೆಚ್ಚಾಗಿ ಲಭ್ಯವಿಲ್ಲ. ಕೆಲವರು ರಾಯಮ್ಮ ರಾಯಸದ ಮಂಚಣ್ಣರ ಪತ್ನಿ ಆಕೆಯೇ ಅಮುಗೇಶ್ವರ ಲಿಂಗ ಎಂಬ ಅಂಕಿತವಾದ ವಚನಗಳ ಕರ್ತೃ ಎಂದು ಹೇಳಿದರೆ, ಕೆಲವರು ಆಕೆ ಅಮುಗೆ ದೇವಯ್ಯಗಳ ಪತ್ನಿ ಎಂದು ಹೇಳುತ್ತಾರೆ. ಕೆಲವರು ಅಮುಗೆದೇವಯ್ಯ ಈಕೆಯ





ಗುರುವಾಗಿರಬೇಕು ಎಂದು ಅಭಿಪ್ರಾಯ ಪಡುತ್ತಾರೆ.

ರಾಯಸದ ಮಂಚಣ್ಣ, ರಾಯಮ್ಮರು ಬಸವಣ್ಣನವರ ನಂಬಿಗಸ್ಥರು. ಅರಿದಡೆ ತಾನು, ಮರೆದಡೆ ಮಾನವ ಜಗದೊಳ್‌ಎಂಬ ತತ್ವಕ್ಕೆ ಒಳಗಾದವರು. ರಾಯಸದ ಮಂಚಣ್ಣ ಅಣ್ಣನವರ ಆಪ್ತ, ಅವರ ಅಭಿಪ್ರಾಯ ಇವರಿಗೆ ತಿಳಿಸುವ ಹೊಣೆಗಾರಿಕೆ ಕಾರ್ಯ ಈತನದು. ಈತನು ಮೊದಲನೆಯದಾಗಿ ಭಾಗ್ಯಶಾಲಿ. ಏಕೆಂದರೆ ಅಣ್ಣನವರ ಹೃದಯ ಸಂಪತ್ತಿನ ಧರ್ಮದರ್ಶಿತ್ವ ಪಡೆದವನು, ಎರಡನೆಯ ದೃಷ್ಟಿಯಿಂದಲೂ ಭಾಗ್ಯಶಾಲಿ, ಹಗಲೆಲ್ಲ ಅಣ್ಣನವರ ಸಾನಿಧ್ಯ, ಮನೆಗೆ ಬರುತ್ತಲೆ ತನ್ನಂತೆ ಶರಣ ಮಾರ್ಗವನ್ನು ನಂಬಿ ನಡೆದ ಮಡದಿ ರಾಯಮ್ಮಳ ನಸು ನಗೆಯ ಸ್ವಾಗತ; ಇನ್ನೇನು ಬೇಕು ಬಾಳು ಬಂಗಾರವಾಗಲು.

ಮಂಚಣ್ಣನವರದು 'ಜಾಂಬೇಶ್ವರ' ಎಂಬ ಅಂಕಿತನಾಮವಾದರೆ ರಾಯಮ್ಮಳದು 'ಅಮುಗೇಶ್ವರಾ' ಎಂಬ ಅಂಕಿತನಾಮ. ಆಕೆ ಅಮುಗೇಶ್ವರ ದೇವನನ್ನು ಗುರುವೆಂದು ಭಾವಿಸಿರ ಬೇಕು. ಅದಕ್ಕೆ ಮಂಚಣ್ಣ ಅಡ್ಡಿಪಡಿಸಲಿಲ್ಲ. ಸಮರಸವೇ ಜೀವನ ಎಂದು ನಂಬಿದ್ದ ಶರಣನಿಗದು ಹೊಸದೇನಲ್ಲ. ಸತಿಪತಿ ಗಳೊಂದಾದ ಭಕ್ತಿ ಒಪ್ಪುವುದು ಶಿವಂಗೆ. ಬಿಡುವಿಲ್ಲದ ಕೆಲಸದಲ್ಲಿಯೂ ಆಧ್ಯಾತ್ಮ ಜೀವನ ನಡೆಸುತ್ತಿದ್ದ ಮಂಚಣ್ಣ ವಚನಕಾರರಾಗಿ ಮೆರೆದವರು. ರಾಯಮ್ಮಳಿಗೆ ತಕ್ಕ ಪತಿ ಮಂಚಣ್ಣನಾದರೆ, ಅವನಿಗೆ ತಕ್ಕ ಸತಿ ರಾಯಮ್ಮಳಾಗಿದ್ದಳು.

ರಾಯಮ್ಮಳ ಒಂದನೂರಾ ಹದಿನೈದು ವಚನಗಳು ದೊರಕಿವೆ. ಎಲ್ಲವೂ ಸರಳ ಸುಲಭವಾಗಿ ಮಾರ್ಮಿಕವಾಗಿವೆ. ಅಕ್ಕಮಹಾದೇವಿಯಂತೆ ಆಚಾರಶೀಲಳಾದ ಈಕೆಯ ವಚನಗಳ ವಸ್ತುವೂ ಆಚಾರಪ್ರಧಾನವಾಗಿದೆ. ಸಮಾಜ ವಿಮರ್ಶೆ ಹೆಚ್ಚು ತೀಕ್ಷ್ಣವಾಗಿ ಅಷ್ಟೆ ಕಟುವಾಗಿ ನಡೆದಿದೆ. ಈಕೆಯ ಕೆಲವು ವಚನಗಳಲ್ಲಿ ಅಕ್ಕಮ್ಮಳಲ್ಲಿ ಕಂಡು ಬರದೆ ಇದ್ದ ಆತ್ಮನಿರೀಕ್ಷಣೆಯೂ ಕಾಣಿಸಿದೆ. ಆದರೆ ಅದು ಅಕ್ಕಮಹಾದೇವಿಯಷ್ಟು ತೀವ್ರತರವಾಗಿಲ್ಲ.

**"ಎನ್ನ ದೇಹದ ದಗ್ಧವ ಮಾಡಯ್ಯಾ, ಎನ್ನ ಕಾರ್ಯದಲ್ಲಿದ್ದ ಕರ್ಮವ ತೊರೆಯಯ್ಯಾ ಎನ್ನ ಭಾವದಲ್ಲಿದ್ದ ಭ್ರಮೆಯ ಜರೆಯಯ್ಯಾ, ನಾ ಹಿಡಿವ ಛಲವ ಬಿಡದಿರು ಮಾನವೆ"** ಎಂದು ತನುಮನ ಭಾವಗಳನ್ನು ಶುದ್ಧಪಡಿಸಿಕೊಂಡು ಛಲದಿಂದ ಮುನ್ನಡೆದ ಆಕೆ ಸಾಧನೆಯಿಂದ ಅರಿವನ್ನು ಗುರುವನ್ನಾಗಿ ಮಾಡಿಕೊಳ್ಳುತ್ತಾಳೆ. ಈಗ ಆಕೆಗೆ ಅನ್ಯ ಗುರುಲಿಂಗ ಜಂಗಮರ ಅವಶ್ಯಕತೆ ಬೀಳುವುದಿಲ್ಲ.

●

## ಮನೆಮದ್ದು

## ಬಜೆ

ಮಗುವಿರುವ ಮನೆಯಲ್ಲಿ ಬಜೆ ಚಿರಪರಿಚಿತವಾದ ವಸ್ತು. ಅತ್ಯುಗ್ರ ವಾಸನೆಯುಳ್ಳ ಬಜೆಯನ್ನು ಉಗ್ರಗಂಧಾ ಎಂಬ ಹೆಸರಿನಿಂದ ಕರೆಯುವ ವಾಡಿಕೆಯಿದೆ. ಬಜೆಯ ಮತ್ತೊಂದು ಹೆಸರು 'ವಜಾ' ಎಂದು.

ಮರಳು ಮಿಶ್ರಿತ ಮಣ್ಣು ಹಾಗೂ ಜೌಗು ನೀರಿರುವ ಪ್ರದೇಶದಲ್ಲಿ ಸಾಮಾನ್ಯವಾಗಿ ಬೆಳೆಯುವ ಬಜೆ ಸಸ್ಯದ ಬೇರಿನ ಗಡ್ಡೆಯ ಭಾಗವನ್ನು ನೆಟ್ಟರೆ ಆರು ತಿಂಗಳಲ್ಲಿ ಸಸ್ಯ ಸೊಗಸಾಗಿ ಬೆಳೆದು ನಿಲ್ಲುತ್ತದೆ. ಆ ಸಸ್ಯದ ಬೇರಿನಲ್ಲಿ ಸ್ವಲ್ಪ ಭಾಗವನ್ನು ಮೂಲಿಕೆಯ ರೂಪದಲ್ಲಿ ಉಪಯೋಗಿಸಿಕೊಂಡು, ಸ್ವಲ್ಪ ಭಾಗವನ್ನು ಮತ್ತೆ ನೆಡಬಹುದು.

ಪುಟ್ಟ ಮಕ್ಕಳ ಸ್ಮರಣ ಶಕ್ತಿ ಹೆಚ್ಚಿಸಲು ಹಾಗೂ ತೊದಲು ನಿವಾರಿಸಲು ಹೆಚ್ಚಾಗಿ ಉಪಯೋಗವಾಗುವ ಬಜೆಯನ್ನು ಶೀತ-ನೆಗಡಿ, ಹೊಟ್ಟೆನೋವು, ತಲೆನೋವು ಹಾಗೂ ಕೀಲುನೋವನ್ನು ಶಮನ ಮಾಡಲು ಬಳಸಬಹುದು.

- ತೋಯುವ ಕಲ್ಲಿನ ಮೇಲೆ ನಾಲ್ಕೈದು ಹನಿ ಶುದ್ಧ ಜೇನುತುಪ್ಪ ಹಾಕಿ, ಬಜೆಯ ಬೇರಿನ ಚೂರೊಂದನ್ನು ಇಟ್ಟು ಗಂಧದ ರೂಪದಲ್ಲಿ ತೇಯಬೇಕು. ಈ ಗಂಧವನ್ನು ಮಕ್ಕಳಿಗೆ ತಿನ್ನಿಸುವುದರಿಂದ ಸ್ಮರಣ ಶಕ್ತಿ ಹೆಚ್ಚಿದರೆ, ತೊದಲಿಕೆ ಕಡಿಮೆಯಾಗಿ ಸುಸ್ಪಷ್ಟರಾಗಿ ಮಾತು ಹೊರಡುತ್ತದೆ.
- ಮಕ್ಕಳಿಗೆ ತೇದ ಗಂಧವನ್ನು ನೀಡುವಾಗ ವಯಸ್ಸನ್ನು ಗಮನದಲ್ಲಿಟ್ಟುಕೊಳ್ಳುವುದು ಅತಿ ಮುಖ್ಯ. ಎರಡು ತಿಂಗಳ ಮಕ್ಕಳಿಂದ ಐದು ವರ್ಷದ ಮಕ್ಕಳವರೆಗೆ ಉಪಯೋಗಿಸಬಹುದಾದ ಬಜೆಯ ಗಂಧವನ್ನು ಚಿಕ್ಕ ಮಕ್ಕಳಿಗಾದರೆ ಉದ್ದಿನ ಕಾಳಿನ ಗಾತ್ರದಷ್ಟು ಉಪಯೋಗಿಸಬೇಕು. ದೊಡ್ಡವರಾದರೆ ಗುಲಗಂಜಿಯ ಪ್ರಮಾಣದಷ್ಟು ಗಂಧವನ್ನು ಕೊಡಬಹುದು.

# ಭೂತಾಯಿ

- ಕವಿತಾಕೃಷ್ಣ

ಸಕಲ ಜೀವರಾಶಿಗಳಿಗೂ, ಚರಾಚರಗಳಿಗೂ ನೆಲೆ ನೀಡಿರುವ ಭೂಮಿಯನ್ನು ನಮ್ಮ ಪ್ರಾಚೀನರು 'ಭೂತಾಯಿ' ಎಂದು ಕರೆದರು. ಜನ್ಮವಿತ್ತ ಪೂಜ್ಯಳಾದ ತಾಯಿದೇವರ ಸ್ಥಾನವನ್ನಿತ್ತು ಗೌರವಿಸಿದರು. ನಮ್ಮ ಮಹಾಕಾವ್ಯಗಳು 'ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ' ಎಂದು ಕೂಗಿ ಸಾರಿದವು. ಜನ್ಮ ಕೊಟ್ಟ ತಾಯಿ, ಜನ್ಮವಿತ್ತ ಭೂಮಿ ಸ್ವರ್ಗಕ್ಕಿನ್ನ ಮಿಗಿಲು ಎಂದ ಮಾತು ಸತ್ಯಸ್ಯ ಸತ್ಯ. ಇದೊಂದು ಅಮೃತ ಸದೃಶವಾದ ದಿವ್ಯವಾಣಿ, ವಿಶ್ವವೇ ತಲೆದೂಗುವ ಜ್ಞಾನವಾಣಿ.

ಹಡೆದ ಮಗನಿಗೆ ತನ್ನ ಮೊಲೆಹಾಲುಣಿಸಿ, ಅಗತ್ಯವೆನಿಸಿದ್ದನ್ನೆಲ್ಲಾ ಇತ್ತು, ಆತ ಬೇಡಿದ್ದನ್ನೆಲ್ಲಾ ನೀಡಿ ಲಾಲಿಸಿ, ಪೋಷಿಸಿ, ಪೊರೆಯುವ ಕರುಣಾಮಯಿ ತಾಯಿಯಂತೆಯೆ ಭೂತಾಯಿಯೂ ಸಹ ಲೋಕದ ಜೀವರಾಶಿಗಳಿಗೆ ಬೇಕಾದುದನ್ನೆಲ್ಲಾ ನೀಡಿ ಪೊರೆಯುತ್ತಿದ್ದಾಳೆ. ಅವಳು ಹೊರನೋಟಕ್ಕೆ ಮೃಣ್ಮಯಿ. ಒಳನೋಟಕ್ಕೆ ರತ್ನಗರ್ಭ ವಸುಂಧರೆ. ಅವಳು ನೀಡಿರುವ ಕೊಡುಗೆಗಳೇನು ಸಾಮಾನ್ಯವೆ? ನಾವು ಬದುಕಲು ಅತ್ಯಗತ್ಯವಾದವುಗಳನ್ನೆಲ್ಲಾ ಧಾರಾಳವಾಗಿ ನೀಡಿದ್ದಾಳೆ. ಉಸಿರಾಟಕ್ಕೆ ಗಾಳಿ, ಕುಡಿಯಲು ನೀರು, ತಿನ್ನಲು ಆಹಾರ, ಜಾಗೃತವಾಗಿರಲು ಬೆಳಕು, ವಿಶ್ರಾಂತಿ ಪಡೆಯಲು ಕತ್ತಲು, ನಿಲ್ಲಲು ನೆಲೆ ಹೀಗೆ ಏನೆಲ್ಲವನ್ನೂ ನೀಡಿದ್ದಾಳೆ.

ಸೌರವ್ಯೂಹದಲ್ಲಿರುವ ಆಕಾಶಕಾಯಗಳಲ್ಲಿ ಭೂಮಿಯೂ ಒಂದು. ಜೀವಿಗಳಿಗೆ ಅಗತ್ಯವಾದ ನೀರು ಮತ್ತು ಇತರೆ ಸಂಪನ್ಮೂಲಗಳಿರುವುದು ಇಲ್ಲಿಯೇ. ಹೀಗಾಗಿ ಭೂಮಿಯಲ್ಲಿ ಜೀವಿಗಳ ಉದಯವಾಯಿತು. ಇಲ್ಲಿನ ಅಪೂರ್ವ ಸಂಪತ್ತುಗಳಲ್ಲಿ ಮಣ್ಣೂ ಒಂದು. ಸಸ್ಯರಾಶಿ ಬೆಳೆಯಲು ಅದು ಕಾರಣವಾಯಿತು. ಪ್ರಕೃತಿ ಸಂಪತ್ತು ಹೇರಳವಾಗಿರಲು ನೆರವಾಯಿತು. ಜಗತ್ತಿನ ಮೂರನೆಯ ಎರಡುಭಾಗ ನೀರಿನಿಂದ ಆವೃತವಾಗಿದೆ. ಅದರಲ್ಲಿ ಶೇ. ೯೭.೨ ಭಾಗ ಉಪ್ಪು ನೀರಷ್ಟೇ! ಉಳಿದುದರಲ್ಲಿ ಅಲ್ಪಭಾಗ ಸಿಹಿನೀರು. ಇದೊಂದು ಭೂತಾಯಿ ನೀಡಿದ ಅಮೂಲ್ಯ ವರ. ಅವಳ ಕೃಪೆಯಿಂದ ನದಿಗಳು ಹರಿಯುತ್ತವೆ. ಊಟೆ ಚಿಲುಮೆಗಳು ಉಕ್ಕುತ್ತವೆ. ನೀರು ಭೂಮಿಯೊಳಗೆ ಸದಾಕಾಲ ಹರಿಯುತ್ತಿರುತ್ತದೆ. ಭೂತಾಯಿಯನ್ನು ರೈತರು ಅಪಾರವಾದ ಭಕ್ತಿ ಭಾವದಿಂದ ಆರಾಧಿಸುತ್ತಾರೆ. ಅವಳ ಒಡಲಿಗೆ ಒಂದು ಬೀಜ ಬಿತ್ತಿದರೆ ಸಾಕು ಪ್ರತಿಯಾಗಿ ಹಲವಾರು, ನೂರಾರು ಬೀಜಗಳನ್ನು ನೀಡುತ್ತಾಳೆ.

ಭೂಮಿಯನ್ನು ವಿಜ್ಞಾನಿಗಳು ಗ್ರಹವೆಂದು ಕರೆದಿದ್ದಾರೆ. ಭೂಮಿಯನ್ನು ಸುತ್ತುವ ಚಂದ್ರನನ್ನು ಉಪಗ್ರಹ ಎಂದಿದ್ದಾರೆ. ಇದು ಭೂಮಿಯಿಂದ ೨,೩೪,೮೬೦ ಮೈಲಿಗಳ ದೂರದಲ್ಲಿದೆ. ಭೂಮಿಗೆ ಸ್ವಂತ ಬೆಳಕಿಲ್ಲ. ಅದು ಸೂರ್ಯನಿಂದ ಬರಬೇಕು. ಅವನು ೯೩,೦೦೦,೦೦೦ ಮೈಲಿ ದೂರದಲ್ಲಿದ್ದಾನೆ. ಏನಾದರಾಗಲಿ ಭೂಮಿಯು ಪಕ್ಷಿ, ಪ್ರಾಣಿ, ಸಸ್ಯ, ಮಾನವರ ತಾಣ. ಸೋಜಿಗದ ಸುಂದರ ಭಂಡಾರ. ಅದರ ಅಂತರಂಗದ ತುಂಬಾ ಬೆಲೆ ಬಾಳುವ ಏನೋನೋ ವಸ್ತುಗಳು, ವಿಜ್ಞಾನ ಪ್ರಗತಿಗೆ ಸ್ಫೂರ್ತಿ ಇತ್ತಂಥ ಅಮೂಲ್ಯ ಸಂಪತ್ತುಗಳು ಒಂದೇ ಎರಡೇ? ಮಾನವ ತುಂಬಾ ಕುತೂಹಲಕರವಾದ ಪ್ರಾಣಿ. ಭೂಮಿ ಬಗೆದ ಪೆಟ್ರೋಲು ಹೊರತೆಗೆದ. ಖನಿಜ ಸಂಪತ್ತು ಹೊರತೆಗೆದ. ಪಾದರಸ, ಕಲ್ಲಿದ್ದಲು ಹೀಗೆ ಏನೇನ್ನೋ ತೆಗೆದ. ಅವುಗಳಿಂದ ಸಂಶೋಧಕನಾದ. ಜಗತ್ತಿಗೆ ಬಸ್ಸು, ಕಾರು, ವಿಮಾನ, ರೈಲು, ರಾಕೆಟ್, ಯಂತ್ರ ಹೀಗೆ ಏನೋನೋ ಕೊಟ್ಟ. ಪ್ರಕೃತಿ ಸೌಂದರ್ಯ ಆರಾಧಿಸುತ್ತಿದ್ದವ ಕಾಡು ಕಡಿದು, ಕಾಂಕ್ರೀಟ್ ಕಾಡು ಮಾಡಿದ, ಇದರ ಫಲವಾಗಿ ಭೂತಾಯಿ ನಲುಗಿದ್ದಾಳೆ. ಅಣುಬಾಂಬು, ಆಟಂಬಾಂಬುಗಳು ಸಿದ್ಧವಾಗಿವೆ. ಗಾಳಿ,, ನೀರು, ಆಹಾರ ಹೊಲಸಾಗಿದೆ. ಮಾಲಿನ್ಯ ಹೆಚ್ಚಿ ಸಾವಿನ ಸಂಕಟದಲ್ಲಿದ್ದಾನೆ. ಪರಿಸರ ಹಾಳಾಗಿದೆ. ದೃಶ್ಯ ಮಾಲಿನ್ಯವಾಗಿದೆ. ಭೂಮಿ ವಿನಾಶದತ್ತ ಸಾಗುತ್ತಿದೆ. ಮಾನವ ವಿಜ್ಞಾನದ ಹೆಸರಲ್ಲಿ ಉಂಡ ಮನೆಗೆ ಎರಡು ಬಗೆದಿದ್ದಾನೆ. ವಿನಾಶಗೈಯುವ ಪಾಪಕಾರ್ಯ ಮಾಡಿದ್ದಾನೆ.

ಪ್ರಾಚೀನರು ಭೂಮಿಯನ್ನು ಭೂತಾಯಿ, ಭೂದೇವಿ, ಭೂಮಾತೆ ಎಂದು ಕರೆದು ದೇವರಂತೆ ಕಂಡರು. 'ಬೆಳಿಗಾಗ ನಾನೆದ್ದು ಯಾರ್ಯಾರ ನೆನೆಯಾಲಿ?', 'ಎಳ್ಳು ಜೀರಿಗೆ ಬೆಳೆಯೋಳ ಭೂಮಿತಾಯಿನ ಎದ್ದೊಂದು ಗಳಿಗೆ ನೆನೆದೇನ' ಎಂದು ಹಾಡಿದರು. ಭೂತಾಯಿ ಪ್ರಾತಃಸ್ಮರಣೀಯಳಾದಳು. ಆದರೆ ನವನಾಗರಿಕರಿಂದ ಅನಾದರಕ್ಕೆ ಒಳಗಾದಳು. ಪ್ರಾಣಿಸಂಕುಲ ತಬ್ಬಲಿ ಮಕ್ಕಳಂತಾಗಿದೆ. ಇನ್ನಾದರೂ ನಾವು ಮೃಣ್ಮಯಿ ಭೂಮಿಯನ್ನು ಚಿನ್ಮಯವಾಗಿ ಭಾವಿಸೋಣ. ಪರಿಸರ ರಕ್ಷಣೆ ಮಾಡೋಣ. ಭೂಮಿ ಸ್ವರ್ಗವ ಮಾಡೋಣ.





# ಕೈ ತೊಳೆದು ಉಣಬಡಿಸು ಎಲೆ ಮಾನವಾ

- ಡಾ. ಎಂ.ಎಸ್. ರಾಜಣ್ಣ
ಪ್ರಾಧ್ಯಾಪಕರು,
ಸಮುದಾಯ ವೈದ್ಯಶಾಸ್ತ್ರ ವಿಭಾಗ,
ಕೆಂಪೇಗೌಡ ಮೆಡಿಕಲ್ ಕಾಲೇಜು, ಬೆಂಗಳೂರು.

ನ್ಯೂಯಾರ್ಕ್ ನಗರದ ಮಿಲಿಟರಿ ಶಿಬಿರದಲ್ಲಿ ಟೈಫಾಯಿಡ್ (ವಿಷಮಶೀತಜ್ವರ) ಪಿಡುಗು ಆರಂಭವಾಯಿತು. ಇದಕ್ಕೆ ಕಾರಣವನ್ನು ವೈದ್ಯರು ಅತಿ ಪ್ರಯಾಸದಿಂದ ಕಂಡು ಹಿಡಿದು "ಮೇರಿ" ಎಂಬ ಅಡಿಗೆಯವಳು ಟೈಫಾಯಿಡ್ ರೋಗವನ್ನು ಆಹಾರದ ಮೂಲಕ ಹರಡುತ್ತಿದ್ದಾಳೆ ಎಂದು ತಿಳಿಸಿದರು. ಆದ್ದರಿಂದ ಅವಳನ್ನು ಕೆಲಸದಿಂದ ಉಚ್ಚಾಟನೆ ಮಾಡಲಾಯಿತು. ಆದರೆ ಮೇರಿ ಅಲ್ಲಿಗೇ ಬಿಡದೆ ಬೇರೆ ದೇಶಕ್ಕೆ ಹೋಗಿ ಅಲ್ಲಿನ ಮಿಲಿಟರಿ ಪಾಕ ಶಾಲೆಯಲ್ಲಿ ಕೆಲಸಕ್ಕೆ ಸೇರಿ ಸಾವಿರಾರು ಮಂದಿಗೆ ಟೈಫಾಯಿಡ್ ಹರಡುವುದರಲ್ಲಿ ಯಶಸ್ಸು ಪಡೆದಳು.

"ಕಾರ್ಖಾನೆಯ ಕ್ಯಾಂಟೀನಿನಲ್ಲಿ ಊಟ ಮಾಡಿದ ಸುಮಾರು ಇನ್ನೂರು ಮಂದಿ ಕೆಲಸಗಾರರು ಕೆಲವು ಗಂಟೆಗಳ್ಳಲಿ ವಿಪರೀತ ಸುಸ್ತು, ವಾಂತಿ, ಭೇದಿಗೆ ತುತ್ತಾಗಿ ಅವರುಗಳನ್ನು ಆಸ್ಪತ್ರೆಗೆ ಸೇರಿಸಲಾಗಿದೆ."

- "ಸಂತೋಷ ಕೂಟವೊಂದರಲ್ಲಿ ಊಟ ಮಾಡಿದ ಶಾಲಾ ಮಕ್ಕಳಲ್ಲಿ ಜ್ವರ, ವಾಂತಿ ಭೇದಿ ಇತ್ಯಾದಿ ತೊಂದರೆ ಕಂಡು ಬಂದು ಆಸ್ಪತ್ರೆಗೆ ಸೇರಿಸಲಾಗಿದೆ."

- "ಬೆಂಗಳೂರಿನಲ್ಲಿ ಕಾಲರಾ ಪಿಡುಗು"

- "ಡಾಕ್ಟರೇ, ಆಮಶಂಕೆ, ಭೇದಿ, ಹೊಟ್ಟೆ ನೋವು".

- "ಡಾಕ್ಟರೇ, ಹಸಿವಿಲ್ಲ, ಜ್ವರ, ಕಣ್ಣು ಹಳದಿ ಬಣ್ಣಕ್ಕೆ ತಿರುಗಿದೆ. ಮೂತ್ರ ಸಹ ಹಳದಿ ಬಣ್ಣ ಹೋಗುತ್ತದೆ."

ಮೇಲೆ ತಿಳಿಸಿದ ಅನೇಕ ಸುದ್ದಿ ಅಥವಾ ಆಸ್ಪತ್ರೆಯಲ್ಲಿನ ದೃಶ್ಯಗಳು ಇತ್ತೀಚೆಗೆ ಸರ್ವೇಸಾಮಾನ್ಯ. ಇವುಗಳಲ್ಲಿ ಅನೇಕ ರೋಗಗಳು ಮನುಷ್ಯನಿಂದ ಮನುಷ್ಯನಿಗೆ, ಹರಡುತ್ತದೆ. ದೇಹ ಸ್ವಚ್ಛತೆ ಪಾಲಿಸದೆ ಇರುವುದರಿಂದ, ಅದರಲ್ಲೂ ಮುಖ್ಯವಾಗಿ ಮಲವಿಸರ್ಜನೆ ಮಾಡಿದ ಅನಂತರ, ಕೈ ಸರಿಯಾಗಿ ತೊಳೆಯದೆ ಆಹಾರ ಬಡಿಸುವುದರಿಂದ, ಅನೇಕ ರೋಗಗಳು ಹರಡಲು ಕಾರಣ ಎಂದರೆ ಬಹಳ ಮಂದಿ ನಂಬುವುದಿಲ್ಲ.

ಪಟ್ಟಣಗಳಲ್ಲಿ ಇತ್ತೀಚೆಗೆ ಹಳ್ಳಿಗಳಲ್ಲಿಯೂ ಸಹ, ಹೋಟೆಲ್‌ಗಳಲ್ಲಿ ಆಹಾರ ಸೇವಿಸುವವರ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿದೆ. ಪಟ್ಟಣಗಳಲ್ಲಿ ಅನೇಕ ವಿದ್ಯಾರ್ಥಿಗಳು ಹಾಸ್ಟೆಲಿನಲ್ಲಿ ಅಥವಾ ಕ್ಯಾಂಟೀನಿನಲ್ಲಿ ಆಹಾರ ಸೇವಿಸುತ್ತಾರೆ.

ಅನೇಕ ಹೋಟೆಲು ಅಥವಾ ಹಾಸ್ಟೇಲುಗಳಲ್ಲಿ ಅಡಿಗೆ ಮಾಡುವವರಲ್ಲಿ ದೈಹಿಕ ಸ್ವಚ್ಛತೆ ಬಗ್ಗೆ ಜ್ಞಾನ ಬಹಳ ಕಡಿಮೆ. ಆಗಾಗ ಮೂಗಿನಿಂದ ಸಿಂಬಳ ತೆಗೆದು ಕೆಲಸ ಮಾಡುವ ಜಾಗದಲ್ಲೆ (ಅಡಿಗೆ ಮನೆಯಲ್ಲಿಯೆ) ಹಾಕುವುದು, ಮೂಗು; ಕಿವಿಯೊಳಗೆ ಆಗಾಗ ಬೆರಳು ಹಾಕುತ್ತಿರುವುದು, ಆಗಾಗ ಮೂತ್ರ, ಮಲವಿಸರ್ಜನೆ ಮಾಡಿ ಕೈ ತೊಳೆಯದೆ ಅಥವಾ ಸರಿಯಾಗಿ ಕೈ ತೊಳೆಯದೆ ಅಡಿಗೆ ಮಾಡುವುದು ಅಥವಾ ಬಡಿಸುವುದು, ಇವು ಸರ್ವೇಸಾಮಾನ್ಯವಾಗಿ ಕಂಡು ಬರುವ ದೃಶ್ಯಗಳು. ಮಾನವನ (ರೋಗಿಯ) ಚರ್ಮ, ಮೂಗು, ಗಂಟಲಿನಲ್ಲಿ ಮಲ-ಮೂತ್ರದಲ್ಲಿ ಅಸಂಖ್ಯಾತ ರೋಗಾಣುಗಳು ವಿಸರ್ಜಿಸಲ್ಪಡುತ್ತಿರುತ್ತವೆ. ಕೆಲವು ಮುಖ್ಯ ರೋಗಾಣುಗಳೆಂದರೆ ಚರ್ಮದಲ್ಲಿ ಗಾಯ ಅಥವಾ ಹುಣ್ಣುಗಳಲ್ಲಿ ಸ್ಟೆಫೈಲೋಕಾಕಸ್, ಸ್ಟ್ರೆಪ್ಟೋಕಾಕಸ್ ಮುಂತಾದವು. ಸ್ಟೆಫೈಲೋಕಾಕಸ್ ಬ್ಯಾಕ್ಟೀರಿಯ ವೃದ್ಧಿಯಾಗುವಾಗ ವಿಸರ್ಜಿಸಲ್ಪಡುವ ವಿಷ, ಆಹಾರ ಸೇರಿ, ಆಹಾರ ಸೇವಿಸುವವರಿಗೆ ಅಸ್ವಸ್ಥತೆ ವಾಂತಿ ಭೇದಿಯನ್ನುಂಟು ಮಾಡುತ್ತದೆ. ಈ ವಿಷ ಆಹಾರವನ್ನು ಬಿಸಿ ಮಾಡಿದರೂ ಸಹ ನಾಶವಾಗುವುದಿಲ್ಲ. ಇದೇ ರೀತಿ ಸಿಕ್ಕ ಸಿಕ್ಕಲ್ಲಿ ಮಲ ವಿಸರ್ಜನೆ ಮಾಡುವುದರಿಂದ ಅಥವಾ ಮಲ ವಿಸರ್ಜನೆ ಮಾಡಿ ಸರಿಯಾಗಿ ಕೈತೊಳೆಯದೆ ಆಹಾರ ಬಡಿಸುವುದರಿಂದ ಹರಡುವ ರೋಗವೆಂದರೆ 'ಅಮೀಬಿಯಾಸಿಸ್'.

ಸಾಮಾನ್ಯವಾಗಿ ಭಾರತ ದೇಶದಲ್ಲಿ ಅಮೀಬಿ ಯಾಸಿಸ್ ಆಮಶಂಕೆಯಿಂದ ನರಳದೆ ಇರುವವರು ಅತ್ಯಂತ ವಿರಳ. ಇದಕ್ಕೆ ಕಾರಣ "ಎಂಟಮೀಬ ಹಿಸ್ಟಲಿಟಿಕಾ" ಎಂಬ ಏಕಾಣು ಜೀವಿಯಿಂದ ದೊಡ್ಡ ಕರುಳಿನಲ್ಲಿ ಹುಣ್ಣಾಗಿ ಮಲಯದಲ್ಲಿ ರಕ್ತ; ಕೀವು ಅಂದರೆ ಆಮಶಂಕೆ ಭೇದಿ ಉಂಟಾಗುತ್ತದೆ. ಸಂಪೂರ್ಣ ಚಿಕಿತ್ಸೆಯಿಂದ ಆಮಶಂಕೆ ಗುಣವಾದರೂ ಆ 'ರೋಗಿ ಎಂಟಮೀಬ ಹಿಸ್ಟಲಿಟಿಕಾ' ಕೋಶವನ್ನು ಅನೇಕ ದಿನಗಳವರೆಗೆ ಮಲದಿಂದ ಹೊರಗೆ ಹಾಕುವುದರ ಮೂಲಕ ರೋಗ ಹರಡುತ್ತಾನೆ. 'ಎಂಟಮೀಬ ಹಿಸ್ಟಲಿಟಿಕಾಸಿಸ್ಟ್' ಅಂಗೈನಲ್ಲಿ

(ಮಲವಿಸರ್ಜನೆ ಮಾಡಿ ಸರಿಯಾಗಿ ಕೈ ತೊಳೆಯದಿದ್ದರೆ) ಸುಮಾರು ಹದಿನೈದು ನಿಮಿಷ ಬದುಕಬಲ್ಲುದು. ಉಗುರಿನ ಕೆಳಗೆ ಮೂರು ವಾರ ಬದುಕಬಲ್ಲುದು. ಐಸ್‌ಕ್ರೀಂನಲ್ಲಿ ಮೂರು ತಿಂಗಳವರೆಗೆ ಬದುಕಬಲ್ಲದು. ಆದ್ದರಿಂದ ಸ್ವಚ್ಛತೆ ಪಾಲಿಸದ ರೋಗಿ ಮನೆಯಲ್ಲಿ ಇತರರಿಗೆ, ಹಾಸ್ಟೆಲಿನಲ್ಲಿ ವಿದ್ಯಾರ್ಥಿಗಳಿಗೆ, ಹೋಟೆಲಿನಲ್ಲಿ ಅಥವಾ ಐಸ್‌ಕ್ರೀಂ ಕಾರ್ಖಾನೆಯಲ್ಲಿ ಐಸ್‌ಕ್ರೀಂ ಇತ್ಯಾದಿಗಳ ಮೂಲಕ ಅಸಂಖ್ಯಾತ ಜನರಿಗೆ 'ಅಮೀಬಿಯಾಸಿಸ್' ರೋಗ ಹರಡುವ ಸಾಧ್ಯತೆ ಉಂಟು. ಈ ರೋಗದಿಂದ ಕೇವಲ ಆಮಶಂಕೆಯಷ್ಟೇ ಅಲ್ಲದೆ ಪಿತ್ತಜನಕಾಂಗ, ಶ್ವಾಸಕೋಶ ಮೆದುಳಿನಲ್ಲಿ; ಕೀವು ತುಂಬಿದ ಬಾವು (Amoebic abscess) ಉಂಟಾಗಬಹುದು ಎಂದು ತಿಳಿದರೆ ಈ ರೋಗದ ತೀವ್ರತೆಯ ಅರಿವಾಗುತ್ತದೆ. ಹುಬ್ಬಳ್ಳಿಯಲ್ಲಿ ನಡೆಸಿದ ಅಧ್ಯಯನವೊಂದರಲ್ಲಿ ಹೋಟೆಲಿನ ಕೆಲಸಗಾರರಲ್ಲಿ ಹೆಚ್ಚು ಮಂದಿ "ಅಮೀಬಿಯಾಸಿಸ್" ರೋಗಿಂದ ನರಳುತ್ತಿರುವುದು ಕಂಡುಬಂದಿದೆ.

ಇದೇ ರೀತಿಯಲ್ಲಿ ಟೈಫಾಯಿಡ್, ಕಾಲರಾ ರೋಗಿಗಳು ಪೂರ್ಣವಾಗಿ ಚಿಕಿತ್ಸೆ ಪಡೆಯದೆ ಇದ್ದರೆ, ಅಂದರೆ ಹಣದ ಕೊರತೆಯಿಂದ ವೈದ್ಯರು ತಿಳಿಸಿದಷ್ಟು ಕಾಲ ಔಷಧಿ ತೆಗೆದು ಕೊಳ್ಳದೆ ಅಥವಾ ನಕಲಿ ವೈದ್ಯರಿಂದ ಚಿಕಿತ್ಸೆ ಪಡೆದು ಜ್ವರ ಅಥವಾ ಇತರ ತೊಂದರೆ ಸ್ಥಗಿತಗೊಂಡು ಕೆಲಸಕ್ಕೆ ಹಿಂದಿರುಗುತ್ತಾನೆ. ಆದರೆ ಟೈಫಾಯಿಡ್ ರೋಗಿಗಳು ಮಲಮೂತ್ರದಲ್ಲಿ ಟೈಫಾಯಿಡ್ ರೋಗಾಣುಗಳನ್ನು, ಕಾಲರಾ ರೋಗಿಗಳು ಮಲಮೂತ್ರದಲ್ಲಿ ಟೈಫಾಯಿಡ್ ರೋಗಾಣುಗಳನ್ನು, ಕಾಲರಾ ರೋಗಿಗಳು ಮಲದ ಮೂಲಕ ರೋಗಾಣುಗಳನ್ನು ಇತರ ಆರೋಗ್ಯವಂತರಿಗೆ ಹರಡುತ್ತಾರೆ. ಇವರುಗಳು ಹೋಟೇಲು, ಹಾಸ್ಟೆಲ್‌ನ ಕೆಲಸಗಾರರಾದರಂತೂ ರೋಗಗಳು ಹೆಚ್ಚಿನ ಸಂಖ್ಯೆಯ್ಲಲಿ ಹರಡಲು ಅಥವಾ ರೋಗದ ಪಿಡುಗು ಉಂಟಾಗಲು ಕಾರಣರಾಗುತ್ತಾರೆ.

ಕೆಲವು ಮನೆ, ಹೋಟೆಲುಗಳಲ್ಲಿ, ನಾಯಿ, ಬೆಕ್ಕುಗಳು ಯಾವ ಅಡಚಣೆಯಿಲ್ಲದೆಯೇ ಓಡಾಡುವುದುಂಟು. ಇತ್ತೀಚೆಗೆ ಮಕ್ಕಳಷ್ಟೇ ಅಲ್ಲದೆ ದೊಡ್ಡವರು ಕೂಡ ನಾಯಿಯನ್ನು ಮುದ್ದಿಸುವುದು, ಪ್ರೀತಿಯಿಂದ ಮೈಸವರುವುದು ಸರ್ವೇಸಾಮಾನ್ಯವಾಗಿದೆ. ನಾಯಿ ಲಾಡಿ ಹುಳುವಿನಿಂದ ನರಳುತ್ತಿದ್ದರೆ, ನಾಯಿಯ ಮಲದ ಮೂಲಕ ಲಾಡಿ ಹುಳುವಿನ ಮೊಟ್ಟೆಗಳು ಹೊರಬೀಳುತ್ತವೆ. ನಾಯಿಯ ಮೈದಡವಿ ಸರಿಯಾಗಿ ಕೈತೊಳೆಯದೆ ಆಹಾರ ಸೇವಿಸಿದರೆ ಅಥವಾ ಆಹಾರ ಬಡಿಸಿದರೆ ಲಾಡಿಹುಳುವಿನ ಮೊಟ್ಟೆಗಳು ಮಾನವನ ದೇಹ ಸೇರಿ, ಅನಂತರ ಪಿತ್ತಜನಕಾಂಗ, ಶ್ವಾಸಕೋಶ, ಮೆದುಳು ಮುಂತಾದ ಭಾಗದಲ್ಲಿ ಹೈಡಾಟಿಡ್ ಕೋಶವಾಗಿ ಬೆಳೆಯುತ್ತವೆ. ಕೋಶದ ವ್ಯಾಪ್ತಿ ಹಾಗೂ ಅಂಗಾಂಗಳಿಗೆ ಸಂಬಂಧಪಟ್ಟ ತೊಂದರೆಗಳು ಮನುಷ್ಯರಲ್ಲುಂಟಾಗುತ್ತವೆ. ಈ ರೋಗಕ್ಕೆ ಚಿಕಿತ್ಸೆ ಇಲ್ಲದಿರುವುದರಿಂದ ಶಸ್ತ್ರಕ್ರಿಯೆ ಮೂಲಕ ಕೋಶವನ್ನು ತೆಗೆಯಬೇಕು. ಕೆಲವೊಮ್ಮೆ ಕೋಶ ಒಡೆದು ಅದರಲ್ಲಿನ ದ್ರವ ರಕ್ತ ಸೇರಿ ಮರಣಾತಿಕ ತೊಂದರೆ ಸಹ ಉಂಟಾಗಬಹುದು.

ಅತಿಭೇದಿ ರೋಗವು ಕಲುಷಿತವಾದ ನೀರಿನ ಮೂಲಕ, ಆಹಾರದ ಮೂಲಕ ಮಗುವಿನಿಂದ ಮಗುವಿಗೆ ಹರಡುತ್ತದೆ. ರೋಗಿಯ ಮಲದ ಮೂಲಕ ಹೊರಬಂದ ರೋಗಾಣುಗಳು ನೀರಿನಲ್ಲಿ ಬೆರೆತು ಅಥವಾ ನೊಣಗಳ ಮೂಲಕ ಆಹಾರ ಸೇರಿ ಕಾಲರಾ ರೋಗಕ್ಕೆ ತುತ್ತಾಗುವ ಸಂಭವ ಹೆಚ್ಚು.

**ಗಮನಿಸಿ**

* ಆಹಾರ ತಯಾರಿಸುವ ಮತ್ತು ಬಡಿಸುವ ಮುನ್ನ ಸೋಪು ಉಪಯೋಗಿಸಿ ಚೆನ್ನಾಗಿ ಕೈ ತೊಳೆಯಿರಿ. ನಿಮ್ಮಿಂದ ಇತರರಿಗೆ ಅನೇಕ ರೋಗಗಳು ಹರಡಬಹುದು.
* ಆಹಾರ ಸೇವಿಸುವ ಮುನ್ನ ಚೆನ್ನಾಗಿ ಕೈ ತೊಳೆದು ಕೊಳ್ಳುವುದು ಒಳ್ಳೆಯ ಅಭ್ಯಾಸ.
* ಸಾಕು ಪ್ರಾಣಿಗಳನ್ನು ಮುಟ್ಟಿದ ನಂತರ ಚೆನ್ನಾಗಿ ಕೈ ತೊಳೆಯರಿ.
* ಸಂಪೂರ್ಣ ಚಿಕಿತ್ಸೆ ಪಡೆಯದ ರೋಗಿಗಳ ಮಲದಲ್ಲಿ ಅನೇಕ ತಿಂಗಳವರೆಗೆ ಮಲದ ಮೂಲಕ ರೋಗಾಣುಗಳು ಹೊರಗೆ ಹಾಕಲ್ಪಡುತ್ತವೆ. ಉದಾಹರಣೆಗೆ ಅಮೀಬಿಯಾಸಿಸ್, ಟೈಫಾಯಿಡ್, ಕಾಲರಾ, ಕಾಮಾಲೆ ರೋಗ ಇತ್ಯಾದಿ.
* ಹೋಟೆಲು ವಿದ್ಯಾರ್ಥಿನಿಲಯ, ಕ್ಯಾಂಟೀನ್‌ಗಳಲ್ಲಿ ಕೆಲಸಗಾರರ ಮಲಮೂತ್ರ ಪರೀಕ್ಷೆ ಮಾಡಿಸಿ ಸೂಕ್ತ ಚಿಕಿತ್ಸೆ ಕೊಡಿಸಬೇಕು.
* ಮಲಮೂತ್ರ ವಿಸರ್ಜನೆ ಮಾಡಿದ ನಂತರ ಸರಿಯಾಗಿ ಸ್ವಚ್ಛತೆ ಪಾಲಿಸದಿದ್ದರೆ ಅಂಗೈನಲ್ಲಿ, ಉಗುರಿನ ಕೆಳಗೆ, ರೋಗಾಣುಗಳು ಕೆಲಕಾಲ ಮತ್ತು ನೀರು, ಆಹಾರ, ಐಸ್‌ಕ್ರೀಂನಲ್ಲಿ ಹೆಚ್ಚು ಕಾಲ ಬದುಕಬಲ್ಲವು.

ಮೇಲೆ ತಿಳಿಸಿದ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಮುನ್ನೆಚ್ಚರಿಕೆ ಕ್ರಮ ಕೈಗೊಂಡರೆ ರೋಗ ಹರಡದಂತೆ ಮಾಡಬಹುದು.





# ಅರವತ್ತುಮೂರು ಪುರಾತನ ಶರಣರು

- ಡಾ. ಬಿ. ಎಸ್. ಸ್ವಾಮಿ
ಕಾರ್ಯಕ್ರಮ ನಿರ್ವಹಣಾಧಿಕಾರಿ,
ಆಕಾಶವಾಣಿ ಬೆಂಗಳೂರು.

## ೫೭ ಚಿರು ಪುಲಿ ಯಾಂಡರು

ಚೋಳ ರಾಜ್ಯದಲ್ಲಿ ಚಿರಪತ್ತೂರೆಂಬ ಪುರ. ಅಲ್ಲಿ ಜಂಗಮ ಭಕ್ತ ಚಿರುಪುಲಿಯಾಂಡರೆಂಬವನು ಇದ್ದ. ಆತನ ದರ್ಶನದಿಂದಲೇ ಅನೇಕ ನಾಸ್ತಿಕರು ಆಸ್ತಿಕರಾಗುತ್ತಿದ್ದರು. ಆತನನ್ನು ಸಾಕ್ಷಾತ್ ಶಿವನೆಂದೇ ಜನರು ನಂಬಿದ್ದರು.ಆತ ಅಷ್ಟಾವರಣ ಪಂಚಾಚಾರ ಬೋಧಕನಾಗಿದ್ದ. ಸದಾ ಜಂಗಮಾರಾಧನೆ ಮಾಡುತ್ತಿದ್ದ. ಜಂಗಮ ಪಾದ ಪೂಜೆ ಮಾಡಿ ಪಾದೋದಕ ಸ್ವೀಕರಿಸಿದ ಮೇಲೆಯೇ ಪ್ರಸಾದ ತೆಗೆದುಕೊಳ್ಳುವ ವ್ರತ ಮಾಡುತ್ತಿದ್ದ. ಜಂಗಮ ಪಾದೋದಕ ಸಿಗದಿದ್ದರೆ ಉಪವಾಸವನ್ನು ಮಾಡುತ್ತಿದ್ದ. ಈತ ಕಟ್ಟುನಿಟ್ಟಿನ ಮಹಾ ಜಂಗಮ ಭಕ್ತ. ಹೀಗೆ ಹಲವಾರು ವರ್ಷಗಳು ಆಚರಿಸುತ್ತಾ ಬಂದ. ಈತನ ಖ್ಯಾತಿ ಶಿವನಿಗೆ ಗೊತ್ತಾಗಿ ಈತನನ್ನು ಪರೀಕ್ಷೆ ಮಾಡಬೇಕೆಂದು ಆತನಿಗೆ ಜಂಗಮನೇ ಸಿಗದಂತೆ ಮಾಡಿ. ಆತ ಜಂಗಮರಿಗಾಗಿ ಹುಡುಕಾಡಿದ. ಮೂವತ್ತೆಂಟು ದಿನಗಳಾದರೂ ಒಬ್ಬ ಜಂಗಮನಾದರೂ ಸಿಗಲಿಲ್ಲ. ಜಂಗಮ ತೃಪ್ತಿ ಮಾಡದೆ ನಾನು ಆಹಾರ ಸೇವಿಸಲಾರೆ, ಪ್ರಾಣವನ್ನು ಇಟ್ಟುಕೊಳ್ಳಲಾರೆ ಎಂದು ಪ್ರಾಣ ಹತ್ಯೆ ಮಾಡಿಕೊಳ್ಳಲು ಯತ್ನಿಸಲು, ಶಿವನು ಜಂಗಮ ರೂಪನಲ್ಲಿ ಆತನ ಮನೆಗೆ ಬಂದ. ಆಗ ಚಿರುಪುಲಿಯಾಂಡರಿಗೆ ಆದ ಸಂತಸ ಅಷ್ಟಿಷ್ಟಲ್ಲ. ಆತನೇ ಸಾಕ್ಷಾತ್ ಪರಮೇಶ್ವರ ಎಂದು ನಮಸ್ಕರಿಸಿ, ಆದರಿಸಿ, ಸತ್ಕರಿಸಿ, ಪಾದ ಪೂಜೆ ಮಾಡಿ, ಪಾದೋದಕ ಸ್ವೀಕಾರ ಮಾಡಿದ. ಈತನ ಬಗೆಗೆ ಮತ್ತಷ್ಟು ಪಠಾಂತರಗಳು ಹೀಗಿವೆ

ಚಿರುಪುಲಿಯಾಂಡರು ಸಂಪಿಗೆ ಮರವನ್ನು ಹತ್ತಲು ತಕ್ಕ ಹುಲಿಯುಗುರುಗಳನ್ನು, ರಾತ್ರಿ ಪುಷ್ಪಗಳು ಕಾಣುವಂತೆ ಚುರುಕಾದ ಕಣ್ಣುಗಳನ್ನು ರೆಂಬೆಯ ಮೇಲೆ ಭಾರವಿಲ್ಲದಂತೆ ಕುಳಿತುಕೊಳ್ಳಲು ಆಗುವಂತಹ ವರವನ್ನು ಶಿವನಿಂದ ಬೇಡಿ ಪಡೆದು ಜಂಗಮಸೇವೆ ಮಾಡುತ್ತಿದ್ದ.

ಒಂದು ದಿನ ಪುಷ್ಪ ಕೊಯ್ಯುವಾಗ ರುದ್ರ ಕನ್ನಿಕೆಯೊಬ್ಬಳು ಈತನನ್ನು ಕಂಡು ಮೋಹಿಸಿದಳು. ರುದ್ರಕನ್ಯೆ ಗಿರಿಜೆಯನ್ನು ಬೇಡಲು ಆಕೆ ಅವಳಿಗೆ ಚಿರುಪುಲಿಯನ್ನು ಕೊಟ್ಟು ಮದುವೆ ಮಾಡಿಸಿದಳು. ಇಬ್ಬರೂ ಲಿಂಗ ಜಂಗಮರ ಸೇವೆ ಮಾಡುತ್ತಾ ಬಹುಕಾಲ ಸುಖವಾಗಿದ್ದು ಕಡೆಗೆ ಕೈಲಾಸ ಸೇರಿದರು.

ಒಮ್ಮೆ ತನ್ನ ಪುಷ್ಪಗಳ ನೀಡಿಕೆಗೆ ಜಂಗಮ ದೊರಕದೆ ಚಿರುಪುಲಿ ಉಪವಾಸವಿದ್ದಾಗ ಶಿವ ಸಹಸ್ರ ಜಂಗಮ ರೂಪದಿಂದ ಬಂದು ಆತನ ಭಕ್ತಿಯನ್ನು ಸ್ವೀಕರಿಸಿ ಕೈಲಾಸಕ್ಕೆ ಕರೆದೊಯ್ದ.

## ೬ ಸೋಮಾಸಿ ಮಾರರು

ಬ್ರಾಹ್ಮಣ ಸೋಮಾಸಿಮಾರ ವಿಭೂತಿ ರುದ್ರಾಕ್ಷಿ ಧಾರಣೆ ಮಾಡಿಕೊಂಡು ಶಿವಭಕ್ತನಾಗಿದ್ದ. ಈತ ಮೂಲತಃ ಕಾಶ್ಮೀರ ದೇಶದವ. ಈತ ವೈರಾಗ್ಯ ತಾಳಿ ತನ್ನ ಗ್ರಂಥಗಳನ್ನು ೧೨ ಕುದುರೆಗಳ ಮೇಲೇರಿ ಕಾಶಿಗೆ ಯಾತ್ರೆ ಹೊರಟ. ಕಾಶಿ ವಿಶ್ವೇಶ್ವರನ ದರುಶನ ಮಾಡಿ ೧೬೦೦೦ ಬ್ರಾಹ್ಮಣರಿಗೆ ದಾನ ಮಾಡಿ, ಕೇದಾರಕ್ಕೆ ಹೋಗುವಾಗ ಸುಲಿಗೆಗೆ ನಿಂತ ಬೇಡನನ್ನು ಪರಿವರ್ತಿಸಿದ. ದೇಶ ಸಂಚಾರ ಮಾಡುತ್ತಾ, ಹಂಪೆಗೆ ಬಂದು ಕೆಲವು ಕಾಲ ಇದ್ದ. ಅಲ್ಲಿ ತಮಿಳುನಾಡಿನ ಶಿವಭಕ್ತರ ವಿಚಾರ ತಿಳಿದು ಅಲ್ಲಿಗೆ ಹೋದ. ಅಲ್ಲಿ ತಿರುಮಾರೂರು (ಕೆಲವೆಡೆ ಅಂಬಲೂರು) ಗ್ರಾಮದಲ್ಲಿ ಸೌಂದರ ನಂಬಿಯ ಪೂಜೆಗೆ ದಿನವೂ ಘಮ ಘಮಿಸುವ ಪುಷ್ಪಗಳನ್ನು ಕೊಡುತ್ತಿದ್ದ. ಸೌಂದರ ನಂಬಿಗೆ ಶಿವನು ಪ್ರತ್ಯಕ್ಷವಾಗುತ್ತಿದ್ದ ಎಂಬ ವಿಷಯವನ್ನು ತಿಳಿದಿದ್ದ. ಸೌಮಾಸಿ ಮಾರ ಸೌಂದರ ನಂಬಿಯ ಹೆಂಡತಿ ಪರವೆನಾಚಿಯನ್ನು ಕೇಳಿದ "ತಾಯಿ ನಾನೊಂದು ಯಜ್ಞ ಮಾಡಬೇಕು, ಅದಕ್ಕೆ ಶಿವನನ್ನು ಕರೆಸಿ ಪಾದಪೂಜೆ ಮಾಡಿ ತೀರ್ಥವನ್ನು ತೆಗೆದುಕೊಳ್ಳಬೇಕೆಂಬಾಸೆ ನನಗಾಗಿದೆ. ಇದು ತಮ್ಮ ಪತಿಯಿಂದ ಸಾಧ್ಯವೆಂದು ಕೇಳಿ ತಿಳಿದಿರುವೆ. ಈ ಕಾರ್ಯ ನಡೆಸಿಕೊಟ್ಟರೆ ನಿಮಗೆ ತುಂಬಾ ಪುಣ್ಯ ಬರುತ್ತದೆ."

"ಆಯ್ತು ಹೇಳುವೆ"

ಅಂದು ಸೋಮಾಸಿಮಾರ ಘಮಘಮಿಸುವ ಹೂಗಳನ್ನು ತಲುಪಿಸಿದ. ಸೌಂದರ ನಂಬಿ ಹೆಂಡತಿಯನ್ನು ಪ್ರಶ್ನಿಸಿದ,

"ಈ ಸುಗಂಧ ಪುಷ್ಪಗಳನ್ನು ದಿನವೂ ತರುತ್ತಿರುವ ಈತ ಯಾರು?"

"ಸೋಮಾಸಿಮಾರನೆಂಬ ಶಿವಭಕ್ತ"

"ಆತನಿಗೆ ೪೦೦೦ ಹೊನ್ನು ನೀಡು"

ಎಂದು ತನ್ನ ಸಚಿವ ತುಂಬುರನಿಗೆ ಹೇಳಿದ. ಅದಕ್ಕೇ ಆತ "ದೇವ ನಾನು ಈ ಪುಷ್ಪಗಳನ್ನು ಹಣಕ್ಕಾಗಿ ಮಾರುತ್ತಿಲ್ಲ, ತಮ್ಮ ಮೇಲಿನ ಭಕ್ತಿಗೆ ನೀಡುತ್ತಿರುವೆ. ಮತ್ತೆ ನೀಮಗೇನು ಬೇಕು? ಎನ್ನಲು ಹೆಂಡತಿ ಮಾತು ಮುಂದುವರಿಸುತ್ತಾ ಈತನ ಒಂದು ಆಸೆ ಎಂದರೆ ಯಜ್ಞ ಮಾಡಿ ಅದಕ್ಕೆ ಶಿವನನ್ನು ಕರೆಸಬೇಕಂತೆ, ಆತನ ದರ್ಶನ, ಪಾದ ಸ್ಪರ್ಶನ, ಪಾದೋದಕ ಪ್ರಸಾದ ಪಡೆಯಬೇಕಂತೆ " "ಆಯ್ತು"

ಈ ಮಾತು ಕೇಳಿದ ಸೋಮಾಸಿಮಾರನಿಗಾದ ಸಂತಸ ಅಷ್ಟಿಷ್ಟಲ್ಲ. ನೇರವಾಗಿ ಊರಿಗೆ ಹೋಗಿ ಯಜ್ಞವನ್ನು ಆರಂಭಿಸಿದ. ಶಿವನು ಈತನ ಭಕ್ತಿ ಪರೀಕ್ಷಿಸಲು ಚಂಡಾಲನ ವೇಷ ಧರಿಸಿ ಯಾಗಶಾಲೆಗೆ ಬಂದ ಸೋಮಾಸಿ ಮಾರ ಈತನೇ ಶಿವನೆಂದು ಗುರ್ತಿಸಿ ಕಾಲಿಗೆರಗುತ್ತಿರಲು ಪುರೋಹಿತರು, "ಅಯ್ಯೋ ಯಾವನೋ ಚಂಡಾಲ ಯಾಗ ಪ್ರದೇಶವನ್ನು ಪ್ರವೇಶಿಸಿ ಅಪವಿತ್ರ ಮಾಡಿದ. ಆತನಿಗೆ ನಮಸ್ಕರಿಸುವುದೆಂದರೇನು ನಾವು ಹೊರಡುತ್ತೇವೆ" ಎಂದು ರೇಗಿದರು. ಆಗ ಸೋಮಾಸಿಮಾರ ನೀವು ಹೋದರೂ ಸರಿ ನಾನು ಇವರ ಪಾದವನ್ನು ಬಿಡುವುದಿಲ್ಲ. ಇವರು ಕುಲಹೀನರಲ್ಲಿ ಸತ್ಕುಲಜರನ್ನು ಮಾಡುವವರು" ಎಂದು ಅವರ ಪಾದ ಪೂಜೆ ಮಾಡಿ, ಪಾದೋದಕ ಸ್ವೀಕರಿಸಿದ. ಯಾಗ ಮಂಟಪವೇ ಪುಷ್ಪಕ ವಿಮಾನವಾಯಿತು. ಸೋಮಾಸಿಮಾರ ಶಿವನೊಡನೆ ಕೈಲಾಸಕ್ಕೆ ಹೊರಟ. ಜನರೆಲ್ಲ ಮೂಕರಾಗಿ ಅಚ್ಚರಿಯಿಂದ ನೋಡತೊಡಗಿದರು. ಹೆಂಡತಿಯ ಜೊತೆ ಸೋಮಾಸಿಮಾರ ಕೈಲಾಸಕ್ಕೆ ಹೋದ . ಶಿವನು ಆತನಿಗೆ ಗಣಪದವಿ ಇತ್ತು ಆಶೀರ್ವದಿಸಿದ. ಮತ್ತೊಂದು ಕಥೆಯ ಪ್ರಕಾರ (ಶಿವಶರಣರ ಚರಿತೆ ಭಾಗ-೩)

ಒಬ್ಬ ಬ್ರಾಹ್ಮಣ ಉತ್ತುಂಗ ಚೋಳನ ರಾಣಿಯ ಅಸ್ತಿಯನ್ನು ತೆಗೆದುಕೊಂಡು ಕಾಶಿಗೆ ಹೋಗುವಾಗ ಸೋಮಾಸಿಮಾರನ ಮಹಿಮೆಯಿಂದ ಅಸ್ತಿಯೆಲ್ಲಾ ಹೂವಾದವು. ಇದನ್ನು ನೋಡಿ ಬ್ರಾಹ್ಮಣ ಈತ ಕಂಡದ್ದೇ ಕಾಶಿ ಎಂದು ಹಿಂದಿರುಗಿ ನಡೆದ ವಿಚಾರವನ್ನು ಚೋಳ ರಾಜನಿಗೆ ತಿಳಿಸಿದ. ಕಾವೇರಿ ತೀರದ ಪೊನ್ನಾಂಬಲ ಕ್ಷೇತ್ರಕ್ಕೆ ಬಂದು ಪೊನ್ನಾಂಬಲಾಧೀಶನನ್ನು ಪೂಜಿಸಿ ಕೆಲಕಾಲವಿದ್ದ. ನಿರ್ಮಾಲ್ಯ ಪುಷ್ಪದಿಂದ ಲಿಂಗಪೂಜುವುದನ್ನು ಸೇವಕರಿಂದ ತಿಳಿದ. ಚೋಳರಾಜ ಈತನನ್ನು ಬರಮಾಡಿಕೊಂಡು "ಇಂಥ ಪುಷ್ಪ ಪೂಜೆಗೆ ಸಲ್ಲದು" ಎಂದ.

"ನೀನು ಅರ್ಪಿಸುವ ಪುಷ್ಪಗಳನ್ನು ಪರಮಾತ್ಮ ತೆಗೆದುಕೊಳ್ಳುವುದಿಲ್ಲ"

"ಏಕೆ?"

"ನಿನಗೆ ಉಪದೇಶವಿಲ್ಲ"

"ಇದಕ್ಕೆ ದೃಷ್ಟಾಂತ ತೋರಿಸು" ಎಂದಾಗ ನಿರ್ಮಾಲ್ಯ ಪುಷ್ಪದಿಂದ ಲಿಂಗವನ್ನು ಮೊದಲು ಪೂಜಿಸಿ ನೂರೆಂಟು ನಮಃ ಶಿವಾಯ ಮಂತ್ರಗಳಿಂದ ಪುಷ್ಪಗಳನ್ನು ಹೊಳೆಗೆ ಹಾಕಲು ಕಟ್ಟೆ ಕಟ್ಟಿದಂತೆ ನೀರು ವಿಶಾಲ ಸರೋವರವಾಗಿ ಅಲ್ಲೇ ನಿಂತಿತ್ತು. ಹಾಗೆಯೇ ತಾನು ಮಾಡುವೆ ಎಂದು ಚೋಳರಾಜ ಮಾಡಲು ಅವು ಪ್ರವಾಹದಲ್ಲಿ ಹರಿದು ಹೋದವು.

ಚೋಳರಾಜ ತನಗೆ ಉಪದೇಶ ಮಾಡಿ ಎಂದು ಅವರನ್ನು ಬೇಡಿ ಉಪದೇಶ ಪಡೆದ.

ಇನ್ನೊಂದು ಪಠಾಂತರದ ಕಥೆ ಹೀಗಿದೆ :-

ಸೋಮಾಸಿಮಾರ ಪರಮ ವೈರಾಗ್ಯ ಶಾಲಿಯಾಗಿ ಕಾಶಿಯಾತ್ರೆ ಹೊರಟು ಅಲ್ಲಿನ ೧೬೦೦೦ ವಿಪ್ರರಿಗೆ ತನ್ನ ಧನವನ್ನೆಲ್ಲಾ ದಾನ ಮಾಡಿ, ವಿಶ್ವೇಶ್ವರನ ದರ್ಶನ ಮಾಡಿ, ಕೇದಾರೇಶ್ವರನ ದರ್ಶನ ಮಾಡಿ ಬರುತ್ತಿರಲು, ದಾರಿಯಲ್ಲಿ ಒಬ್ಬ ಶ್ವಪಚನೆಂಬ ಹೊಲೆಯನು ಆತನನ್ನು ಸುಲಿಗೆ ಮಾಡಲು ಬಂದು, ಆತನ ತೇಜಸ್ಸು ನೋಡಿ ಶಿಷ್ಯನಾದ. ಆತನೊಡನೆ ಸ್ಥಾನಪುರವೆಂಬ ಅಗ್ರಹಾರಕ್ಕೆ ಬಂದ. ಅಲ್ಲಿ ಬ್ರಾಹ್ಮಣರು ಶ್ವಪಚಯ್ಯನ ಜೊತೆಯಲ್ಲಿರುವನೆಂದು ನಿಂದಿಸಲು ಆ ಶ್ವಪಚನಿಂದ ವೇದವನ್ನು ಓದಿಸಿ ಅವರ ಬಾಯಿ ಮುಚ್ಚಿಸಿದ. ಶಿವರಾತ್ರಿಯಲ್ಲಿ ಶ್ರೀ ಶೈಲ ಮಲ್ಲಿಕಾರ್ಜುನ ಲಿಂಗ ಪೂಜಿಸಿ, ಪಂಪಾಕ್ಷೇತ್ರಕ್ಕೆ ಬಂದು, ವಿರೂಪಾಕ್ಷನ ಪೂಜೆ ಸಲ್ಲಿಸಿ ಬರುತ್ತಿರಲು, ಬ್ರಾಹ್ಮಣನೊಬ್ಬ ಉತ್ತುಂಗ ಚೋಳನ ರಾಣಿಯ ಅಸ್ತಿಗಳನ್ನು ಗಂಗೆಯಲ್ಲಿ ಹಾಕಲೆಂದು ಕಾಶಿಗೆ ಹೋಗುವಾಗ ಸೋಮಾಸಿ ಮಾರ ಎದುರಾದ. ಈ ವಿಷಯವನ್ನು ತಿಳಿಸಿದ. ರಾಜ ಆತನನ್ನು ಕರೆಯಿಸಿ ಸತ್ಕರಿಸಿದ. ರಾಜ ಲಿಂಗಕ್ಕೆ ಪೂಜಿಸಿದ ನಿರ್ಮಾಲ್ಯ ಪುಷ್ಪದಿಂದ ಸೋಮಾಸಿಮಾರ ಲಿಂಗ ಪೂಜೆ ಮಾಡುತ್ತಿರಲು ರಾಜ ಅದನ್ನು ಆಕ್ಷೇಪಿಸಿದ, ಆಗ ಸೋಮಾಸಿಮಾರ ಆ ಪುಷ್ಪವನ್ನು ಹೊಳೆಗೆ ಹಾಕಲು ಅದು ಅಡ್ಡಗಟ್ಟಿದಂತಾಗಿ ಸರೋವರವಾಯಿತು. ರಾಜ ದೀಕ್ಷೆ ಆಗದುದೇ ಇದಕ್ಕೆ ಕಾರಣವೆಂದು ಹೇಳಿ ದೀಕ್ಷೆ ಇತ್ತ ಸೋಮಾಸಿಮಾರ.

(ಮುಂದುವರೆಯುವುದು)

ಆಚಾರವೇ ಕುಲ, ಅನಾಚಾರವೇ ಹೊಲೆ
ಇಂತೀ ಉಭಯುವ ತಿಳಿದಿರಬೇಕು.

**-- ಮಾದಾರ ಚನ್ನಯ್ಯ**





# ದಾಳಿಂಬೆ ಬೇಸಾಯ ಕ್ರಮಗಳು

**- ಡಾ. ಕೆ.ಎಸ್. ವೆಂಕಟೇಶಮೂರ್ತಿ**
ಜಲಾನಯನ ಅಭಿವೃದ್ಧಿ ಯೋಜನೆ, ಉಡುಪಿ.

ಅನಿಶ್ಚಿತ ಹವಾಮಾನ, ಅಕಾಲಿಕ ಮಳೆ, ಗಗನಕ್ಕೇರುತ್ತಿರುವ ಕೃಷಿ ಸಾಮಗ್ರಿಗಳ ಬೆಲೆಗಳು ಹಾಗೂ ಕೂಲಿಯಾಳುಗಳ ಅಭಾವದಿಂದಾಗಿ ರೈತ ಬಾಂಧವರು ತೋಟಗಾರಿಕಾ ಬೆಳೆಗಳತ್ತ ಒಲವು ತೋರುತ್ತಿರುವುದು ಸಹಜವೇ ಆಗಿದೆ. ತೋಟಗಾರಿಕಾ ಬೆಳೆಗಳನ್ನು ಬೆಳೆದ ಪ್ರಾರಂಭದ ವರ್ಷಗಳಲ್ಲಿ ಸಾಲುಗಳ ಮಧ್ಯೆ ಸಾಕಷ್ಟು ಸ್ಥಳಾವಕಾಶವಿರುವುದರಿಂದ ರೈತ ಬಾಂಧವರು ತಮ್ಮ ಮನೆ ಬಳಕೆಗಾಗಿ ಬೇಕಾಗುವ ದವಸ ಧಾನ್ಯಗಳನ್ನು ಬೆಳೆದು ಎಕರೆವಾರು ಆದಾಯವನ್ನು ಹೆಚ್ಚಿಸಿಕೊಳ್ಳಬಹುದು.

ತೋಟಗಾರಿಕಾ ಬೆಳೆಗಳ ಪೈಕಿ ದಾಳಿಂಬೆ ಒಂದು ಲಾಭದಾಯಕ ಹಣ್ಣಿನ ಬೆಳೆ. ಇದು ವಾಣಿಜ್ಯ ಬೆಳೆಯೂ ಹೌದು. ಇದರ ಹಣ್ಣು ನೋಡಲು ಆಕರ್ಷಣೀಯ. ತಿನ್ನಲು ಬಲು ರುಚಿಕರ. ದಾಳಿಂಬೆಯಲ್ಲಿ ರಂಜಕ, ಸುಣ್ಣ ಮತ್ತು ಕಬ್ಬಿಣಾಂಶಗಳೇ ಅಲ್ಲದೆ ಜೀವಸತ್ವ "ಬಿ" ಕೂಡಾ ಇದೆ. ದಾಳಿಂಬೆಯ ತಾಯಿನಾಡು ಇರಾನ್. ಇದನ್ನು ಆಯುರ್ವೇದ ಔಷಧಿಯ ತಯಾರಿಕೆಯಲ್ಲಿ ಹೆಚ್ಚಾಗಿ ಬಳಸಲಾಗುತ್ತಿದೆ.

***ಔಷಧೀಯ ಗುಣಗಳು***

೧. ದಾಳಿಂಬೆ ಹಣ್ಣಿನ ರಸವನ್ನು ಸೇವಿಸುವುದರಿಂದ ಪಿತ್ತ ಶಮನವಾಗುತ್ತದೆ. ಶರೀರಕ್ಕೆ ಶಕ್ತಿ ದೊರೆಯುತ್ತದೆ. ರೋಗ ನಿರೋಧಕ ಶಕ್ತಿಯುಂಟಾಗುತ್ತದೆ.

೨. ದಾಳಿಂಬೆ ಹಣ್ಣಿನ ಬೀಜಗಳನ್ನು ನೀರಿನೊಂದಿಗೆ ಅರೆದು ಕುಡಿಯುವುದರಿಂದ ಆಮಶಂಕೆ, ಅತಿಸಾರ ನಿಯಂತ್ರಣಕ್ಕೆ ಬರುತ್ತದೆ.

೩. ದಾಳಿಂಬೆ ಹಣ್ಣಿನ ಬೀಜಗಳನ್ನು ತೆಗೆದ ನಂತರ ಉಳಿಯುವ ದಿಂಡಿನಲ್ಲಿ ಕಷಾಯವನ್ನು ತಯಾರಿಸಿ ಅದಕ್ಕೆ ಅಡಿಗೆ ಉಪ್ಪು ಬೆರೆಸಿ ಬಾಯಿ ಮುಕ್ಕಳಿಸಿದರೆ ಗಂಟಲುನೋವು, ಬಾಯಿಹುಣ್ಣು, ಹಲ್ಲುನೋವು ಗುಣವಾಗುತ್ತದೆ.

೪. ದಾಳಿಂಬೆ ಚಿಗುರನ್ನು ಚೆನ್ನಾಗಿ ಅಗಿಯುವುದರಿಂದ ವಸಡಿನಿಂದಾಗುವ ರಕ್ತಸ್ರಾವ ನಿಲ್ಲುತ್ತದೆ. ಹಾಗೂ ಹಲ್ಲುನೋವು ಮಾಯವಾಗುತ್ತದೆ.

೫. ಪ್ರತಿದಿನ ದಾಳಿಂಬೆ ಹಣ್ಣಿನ ರಸವನ್ನು ಸೇವಿಸುತ್ತಿದ್ದರೆ ಹೃದಯ ಮತ್ತು ಮೂತ್ರಪಿಂಡಗಳ ಕ್ರಿಯೆಗೆ ಚೈತನ್ಯ ದೊರೆಯುತ್ತದೆ.

***ಹವಾಗುಣ***

ಒಣ ಹವೆ ಮತ್ತು ಹೆಚ್ಚು ಉಷ್ಣಾಂಶವಿರುವ ಬೇಸಿಗೆ ವಾತಾವರಣದಲ್ಲಿ ರುಚಿಯಾಗಿರುವ ಮತ್ತು ಆಕರ್ಷಕ ಬಣ್ಣವುಳ್ಳ ಹಣ್ಣಿನ ಬೆಳವಣಿಗೆಗೆ ಅತ್ಯವಶ್ಯ. ಹೆಚ್ಚು ತೇವಾಂಶವುಳ್ಳ ವಾತಾವರಣದಲ್ಲಿ ಹಣ್ಣಿನ ಗುಣಮಟ್ಟ ಕಡಿಮೆಯಾಗುತ್ತದೆ. ದಾಳಿಂಬೆ ನೀರಿನ ಕೊರತೆಯನ್ನು ತಡೆದುಕೊಳ್ಳಬಹುದಾದರೂ ನೀರಾವರಿ ಇದ್ದಲ್ಲಿ ಹೆಚ್ಚು ಇಳುವರಿ ಮತ್ತು ಒಳ್ಳೆಯ ಗುಣಮಟ್ಟದ ಹಣ್ಣುಗಳನ್ನು ಕೊಡುತ್ತದೆ.

***ಮಣ್ಣು***

ದಾಳಿಂಬೆಯನ್ನು ಎಲ್ಲಾ ಬಗೆಯ ಮಣ್ಣುಗಳಲ್ಲಿಯೂ ಬೆಳೆಯಬಹುದು. ಕೆಂಪುಗೋಡು, ಮರಳು ಮಿಶ್ರಿತ ಗೋಡು ಹಾಗೂ ಮೆಕ್ಕಲು ಮಣ್ಣಿನಲ್ಲಿ ಹುಲುಸಾಗಿ ಬೆಳೆಯುತ್ತದೆ.

***ತಳಿಗಳು***

ದೊಡ್ಡಗಾತ್ರದ, ಮೃದು ಬೀಜಗಳಿಂದ ಕೂಡಿದ ರಸಭರಿತ ಹಾಗೂ ಆಕರ್ಷಕ ಸಿಹಿ-ಹುಳಿಗಳ ಸಮಿಶ್ರ ರುಚಿಯಿಂದ ಕೂಡಿದ ಹಣ್ಣುಗಳಿಗೆ ಹೆಚ್ಚು ಬೇಡಿಕೆ ಇದೆ. ನಮ್ಮ ರಾಜ್ಯದಲ್ಲಿ ಬೆಳೆಯುತ್ತಿರುವ ಪ್ರಮುಖ ತಳಿಗಳೆಂದರೆ :

೧. **ಜ್ಯೋತಿ** : ಇದನ್ನು ಜಿ.ಕೆ.ವಿ.ಕೆ. ೧ ಎಂದೂ ಕರೆಯುವರು. ಇದು ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದಿಂದ ಬಿಡುಗಡೆ ಯಾದ ತಳಿ. ಹಣ್ಣುಗಳು ಗಾತ್ರದಲ್ಲಿ ಸಾಧಾರಣ ದೊಡ್ಡವಾಗಿದ್ದು, ಆಕರ್ಷಕ ಹಳದಿ-ಕೆಂಪು ಬಣ್ಣ ಹೊಂದಿರುತ್ತದೆ. ತಿರುಳು ಸಾಕಷ್ಟು ರಸವತ್ತಾಗಿದ್ದು, ದಟ್ಟ ಕೆಂಪು ಬಣ್ಣ ಹೊಂದಿರುತ್ತದೆ. ಬೀಜ ಮೃದುವಾಗಿರುತ್ತದೆ. ಹಣ್ಣಿನ ತೂಕ ಸರಾಸರಿ ೨೨೦ ಗ್ರಾಂ.ಗಳವರೆಗೆ ಇರುತ್ತದೆ.

೨. **ಗಣೇಶ** : ಇದು ಅಧಿಕ ಇಳುವರಿ ಕೊಡುವ ತಳಿ. ಹಣ್ಣು ಸಾಧಾರಣ ದೊಡ್ಡದು. ತಿರುಳು ರಸಭರಿತ ಹಾಗೂ ಕೆನ್ನೀಲಿ. ಬೀಜ ಮೃದು. ಇದು ಉತ್ತರ ಕರ್ನಾಟಕದಲ್ಲಿ ಹೆಚ್ಚು ಜನಪ್ರಿಯವಾಗುತ್ತಿದೆ. ಬಳ್ಳಾರಿ ಜಿಲ್ಲೆಯ ಹಗರಿ ಬೊಮ್ಮನಹಳ್ಳಿ

ಹಾಗೂ ಸುತ್ತಮುತ್ತಲ ಪ್ರದೇಶಗಳಲ್ಲಿ ಬೆಳೆಯ ಲಾಗುತ್ತಿರುವ ಈ ತಳಿಯ ಹಣ್ಣುಗಳು ಕಲ್ಕತ್ತ, ಹೈದ್ರಾಬಾದ್, ಬೆಂಗಳೂರು ಹಾಗೂ ಇನ್ನಿತರ ಪ್ರಮುಖ ನಗರಗಳಿಗೆ ರವಾನೆಯಾಗುತ್ತಿದೆ.

ಈ ತಳಿಗಳೇ ಅಲ್ಲದೆ, ಮಧುಗಿರಿ, ಜರಗನಹಳ್ಳಿ, ಬೇಸಿನ್ ಸೀಡ್‌ಲೆಸ್, ಯಾರ್ಕಾಡ್, ಮಸಂಟ್‌ರೆಡ್, ಸ್ಪಾನಿಷ್ ರೂಬಿ ತಳಿಗಳು ಹೆಚ್ಚು ಬಳಕೆಯಲ್ಲಿವೆ.

**ಸಸ್ಯಾಭಿವೃದ್ಧಿ** : ಸಾಮಾನ್ಯವಾಗಿ ಎಲ್ಲಾ ತಳಿಗಳನ್ನೂ, ರೆಂಬೆಗಳ ತುಂಡುಗಳಿಂದ ಅಭಿವೃದ್ಧಿ ಮಾಡಲಾಗುತ್ತದೆ. ಒಂದು ವರ್ಷ ಪೂರ್ಣ ಬಲಿತ ಗಿಡದ ಬುಡದಿಂದ ಅಥವಾ ಗಿಡದ ಮಧ್ಯದಿಂದ ಬರುವ ಒಂದು ವರ್ಷದ ರೆಂಬೆಗಳಿಂದಲೇ ತುಂಡುಗಳನ್ನು ತಯಾರಿಸಬೇಕು. ಈ ತುಂಡುಗಳ ಸುತ್ತಳತೆ ೧ ಸೆಂಟಿ ಮೀಟರ್ ಮತ್ತು ಉದ್ದ ೨೫ ರಿಂದ ೩೦ ಸೆಂಟಿ ಮೀಟರ್ ಇರಬೇಕು. ತುಂಡುಗಳನ್ನು ನೆಟ್ಟ ೬ ವಾರಗಳ ನಂತರ ಚೆನ್ನಾಗಿ ಬೇರು ಬಿಡುತ್ತದೆ. ಬೇರುಬಿಟ್ಟ ಸಸಿಗಳನ್ನು ಜೂನ್-ಜುಲೈ ತಿಂಗಳುಗಳಲ್ಲಿ ನೆಡಬಹುದು.

ಗೂಟ ಪದ್ಧತಿ (Air Layers) ಹಾಗೂ ಬೇರುಗಳಿಂದ ಬಂದಂತಹ ಗಿಡಗಳನ್ನು ಚೆನ್ನಾಗಿ ಬಲಿತ ನಂತರ ಕತ್ತರಿಸಿ ಪಾಲಿಥೀನ್ ಚೀಲಗಳಲ್ಲಿ ನೆಟ್ಟು ಬೇರು ಬರುವಂತೆ ಮಾಡಿ ಅವುಗಳನ್ನು ಗುಂಡಿಗೆ ವರ್ಗಾಯಿಸಬೇಕು.

**ಬೇಸಾಯ ಕ್ರಮಗಳು**

ಫೆಬ್ರವರಿ-ಮಾರ್ಚ್-ಏಪ್ರಿಲ್ ತಿಂಗಳುಗಳಲ್ಲಿ ಸಾಲಿನಿಂದ ಸಾಲಿಗೆ ಹಾಗೂ ಗಿಡದಿಂದ ಗಿಡಕ್ಕೆ ೧೫ ಅಡಿ ಅಥವಾ ೧೮ ಅಡಿ ಅಂತರವಿರುವಂತೆ ೨ ಘನ ಅಡಿ ಗಾತ್ರದ ಗುಂಡಿಗಳನ್ನು ತೆಗೆದು ಒಣಗಲು ಬಿಡಬೇಕು. ೨ ತಿಂಗಳ ಕಾಲ ಬಿಸಿಲಿನಲ್ಲಿ ಒಣಗಿದ ನಂತರ ಸಮ ಪ್ರಮಾಣದ ಕೊಟ್ಟಿಗೆ ಗೊಬ್ಬರ ಮತ್ತು ಮೇಲ್ಮಣ್ಣನ್ನು ತುಂಬಿ, ಗುಣಿಯ ಮಧ್ಯ ಗಿಡ ನೆಟ್ಟು ಗಾಳಿಗೆ ಅಲುಗಾಡದಂತೆ ಕೋಲಿನಿಂದ ಕಟ್ಟಬೇಕು. ಇದರಿಂದ ಹೊಸ ಬೇರುಗಳು ಸುಲಭವಾಗಿ ಬರಲು ಅನುಕೂಲವಾಗುತ್ತದೆ. ಒಂದು ಎಕರೆ ಪ್ರದೇಶದಲ್ಲಿ '೧೯೩ ಅಥವಾ ೧೩೪ ಗಿಡಗಳನ್ನು ನೆಡಬಹುದು. ಗಿಡ ನೆಡುವುದನ್ನು ಜುಲೈವರೆಗೂ ಮುಂದುವರೆಸಬಹುದು.

**ಕಡ್ಡಿ ಕತ್ತರಿಸುವುದು**

ದಾಳಿಂಬೆ ಗಿಡದಲ್ಲಿ ಬುಡದಿಂದ ಸಾಮಾನ್ಯವಾಗಿ ಹೊಸ ಕವಲುಗಳು ಬರುತ್ತವೆ. ಇವು ಪಕ್ಕದಲ್ಲಿ ಒಡೆದು ನೇರವಾಗಿ ತುದಿಯವರೆಗೂ ಹೋಗುತ್ತವೆ. ಆದರೆ ಹೂ ಅಥವಾ ಕಾಯಿ ಬಿಡುವುದಿಲ್ಲ. ಹೂ ಬಿಟ್ಟರೂ ಒಣಗಿ ಸಾಯುತ್ತದೆ. ಆದ್ದರಿಂದ ಇತಂಹ ಕವಲುಗಳು ಕಂಡೊಡನೆ ಕತ್ತರಿಸಿ ತೆಗೆಯಬೇಕು. ಇಲ್ಲದಿದ್ದಲ್ಲಿ ಇಳುವರಿ ಕಡಿಮೆಯಾಗುತ್ತದೆ.

ದಾಳಿಂಬೆಯಲ್ಲಿ ಹಣ್ಣು ಸೀಳುವುದು ಮತ್ತೊಂದು ಸಮಸ್ಯೆ. ಸರಿಯಾದ ಪ್ರಮಾಣದಲ್ಲಿ ನೀರು ಕೊಡದೇ ಇರುವ ಸಂದರ್ಭಗಳಲ್ಲಿ ಈ ಸಮಸ್ಯೆ ಉಂಟಾಗುತ್ತದೆ. ಆದ್ದರಿಂದ ಮಣ್ಣು ಹೆಚ್ಚಾಗಿ ಒಣಗದಂತೆ ಆಗಾಗ್ಗೆ ನೀರು ಕೊಡುತ್ತಿರಬೇಕು. ಗಾಳಿಯ ರಭಸ ತಡೆಯಲು, ತೋಟದ ಅಂಚಿನಲ್ಲಿ ಸರ್ವೆ, ಸಿಲ್ವರ್ ಓಕ್, ಹೊಂಗೆ ಮುಂತಾದ ಕೆಲವು ಗಾಳಿ ತಡೆ ಗಿಡಗಳನ್ನು ಬೆಳೆಸುವುದರಿಂದ ಹಣ್ಣು ಸೀಳುವಿಕೆಯನ್ನು ತಪ್ಪಿಸಬಹುದು.

**ಗೊಬ್ಬರಗಳ ಪೂರೈಕೆ**

ದಾಳಿಂಬೆಗೆ ಪ್ರತಿ ವರ್ಷ ಪ್ರತಿ ಗಿಡಕ್ಕೆ ಕ್ರಮಬದ್ಧವಾಗಿ ಗೊಬ್ಬರಗಳನ್ನು ಕೊಡುವ ವಿಧಾನ ಹೀಗಿದೆ :

| ಗಿಡದ ವಯಸ್ಸು ವರ್ಷಗಳಲ್ಲಿ | ಕಾಂಪೋಸ್ಟ್ ಗೊಬ್ಬರ (ಕೆ.ಜಿ.ಗಳಲ್ಲಿ) | ಪ್ರತಿ ಗಿಡಕ್ಕೆ ಗ್ರಾಂ.ಗಳಲ್ಲಿ ಸಾ | ರಂ | ಪೊ |
|---|---|---|---|---|
| ೧. ನೆಡುವಾಗ | ೨೦ | - | - | - |
| ೨. ೧ನೇ ವರ್ಷ | ೧೦ | ೧೦೦ | ೧೫೦ | ೫೦ |
| ೩. ೨ನೇ ವರ್ಷ | ೨೦ | ೨೦೦ | ೧೦೦ | ೧೦೦ |
| ೪. ೩ನೇ ವರ್ಷ | ೩೦ | ೩೦೦ | ೧೫೦ | ೧೫೦ |
| ೫. ೪ನೇ ವರ್ಷ | ೪೦ | ೪೦೦ | ೨೦೦ | ೨೦೦ |
| ೬. ೫ನೇ ವರ್ಷ ಹಾಗೂ ನಂತರ | ೫೦ | ೬೨೫ | ೨೫೦ | ೨೫೦ |

ಗಿಡಗಳು ಚಿಕ್ಕವಿರುವಾಗ ಗೊಬ್ಬರಗಳನ್ನು ಮಡಿಗಳಲ್ಲೇ ಕೊಡಬೇಕು. ಬೆಳೆದ ಗಿಡಗಳಿಗೆ ಗಿಡದಿಂದ ೩-೪ ಅಡಿ ಅಂತರದಲ್ಲಿ ಒಂದು ಅಡಿ ಆಳದಲ್ಲಿ ಕೊಟ್ಟು ಮಣ್ಣು ಮುಚ್ಚಬೇಕು.

**ನೀರಾವರಿ**

ದಾಳಿಂಬೆ ನೀರಿನ ಕೊರತೆಯನ್ನು ತಡೆದುಕೊಳ್ಳಬಲ್ಲದು. ಆದರೆ ಹೂ ಬಿಡುವಾಗ, ಕಾಯಿ ಕಚ್ಚುವಾಗ, ನೀರಿನ ಕೊರತೆಯಾದಲ್ಲಿ, ಹೀಚುಗಳು ಉದುರುತ್ತವೆ. ಕಾಯಿ ಮಾಗುವಾಗ ನೀರಿನ ಕೊರತೆಯಾದರೆ ಹಣ್ಣು ಬಿರಿದು ಹಾಳಾಗುತ್ತದೆ. ಗೊಬ್ಬರ ಕೊಡುವಾಗಲೂ ಮಣ್ಣಿನಲ್ಲಿ ಸಾಕಷ್ಟು ತೇವಾಂಶವಿರಬೇಕು. ಇಲ್ಲದಿದ್ದಲ್ಲಿ ಕೊಟ್ಟಂತಹ ಗೊಬ್ಬರಗಳು ಗಿಡಗಳಿಗೆ ಸಿಗದೆ ಪೋಲಾಗುತ್ತವೆ.





ಇತ್ತೀಚೆಗೆ ಹನಿ (ಜಿನುಗು) ನೀರಾವರಿ ಪದ್ಧತಿ ಜನಪ್ರಿಯವಾಗುತ್ತಿದೆ. ಅತಿ ಕಡಿಮೆ ಪ್ರಮಾಣದ ನೀರನ್ನು ಹೆಚ್ಚು ಗಿಡಗಳಿಗೆ ಒದಗಿಸಬಹುದು. ಶೇ. ೪೦ ರಿಂದ ೬೦ರವರೆಗೂ ನೀರಿನ ಉಳಿತಾಯವಾಗುತ್ತದೆ. ಹನಿ ನೀರಾವರಿ ಉಪಕರಣಗಳನ್ನು ಅಳವಡಿಸಲು ಪ್ರಾರಂಭಿಕ ವೆಚ್ಚ ಹೆಚ್ಚಾಗುವುದರಿಂದ ರೈತರ ಅನುಕೂಲಕ್ಕಾಗಿ ರಾಷ್ಟ್ರೀಕೃತ ಬ್ಯಾಂಕುಗಳು ಸಾಲ ನೀಡಲು ಮುಂದೆ ಬಂದಿವೆ. ತೋಟಗಾರಿಕಾ ಇಲಾಖಾವತಿಯಿಂದ ಸಹಾಯಧನ (ರಿಯಾಯಿತಿ) ಸೌಲಭ್ಯವೂ ದೊರೆಯುವುದರಿಂದ ರೈತ ಬಾಂಧವರು ತೋಟಗಾರಿಕಾ ಇಲಾಖಾಧಿಕಾರಿಗಳನ್ನು ಸಂಪರ್ಕಿಸಿ ಈ ಸೌಲಭ್ಯಗಳನ್ನು ಪಡೆದುಕೊಳ್ಳಬಹುದು.

**ಮಧ್ಯಂತರ ಬೆಳೆಗಳು**

ದಾಳಿಂಬೆ ಫಸಲು ಬಿಡಲು ೪-೫ ವರ್ಷಗಳಾದರೂ ಬೇಕು. ಅಲ್ಲಿಯವರೆಗೆ ಸಾಲುಗಳ ಮಧ್ಯೆ ತರಕಾರಿ ಬೆಳೆಗಳು, ರಾಗಿ, ಜೋಳ, ದ್ವಿದಳ ಧಾನ್ಯದ ಬೆಳೆಗಳು ಬೇಗನೆ ಫಲ ಬಿಡುವ ಪಪಾಯ ಮುಂತಾದ ಹಣ್ಣಿನ ಗಿಡಗಳನ್ನು ಬೆಳೆದುಕೊಳ್ಳಬಹುದು.

**ಗಿಡ ಸವರುವುದು**

ದಾಳಿಂಬೆ ಗಿಡವನ್ನು ಮೊದಲು ೨ ಅಡಿ ಎತ್ತರಕ್ಕೆ ಬೆಳೆಸಿ ಕತ್ತರಿಸಿದರೆ, ಕವಲು ರೆಂಬೆಗಳು ಬೆಳೆಯುತ್ತವೆ. ಈ ರೀತಿ ೪ ರಿಂದ ೬ ರೆಂಬೆಗಳನ್ನು ಮಾತ್ರ ಬೆಳೆಯಲು ಬಿಡುವುದೇ ಒಳ್ಳೆಯ ಪದ್ಧತಿ. ಕಾಲಕಾಲಕ್ಕೆ ಇನ್ನಿತರ ಚಿಗುರುಗಳನ್ನು ತೆಗೆಯಬೇಕಾಗುತ್ತದೆ. ಹೀಗೆ ಮಾಡುವುದರಿಂದ ೨-೩ ವರ್ಷಗಳಲ್ಲಿ ಗಿಡವು ನಿರ್ದಿಷ್ಟ ಆಕಾರ ಪಡೆದು ಉತ್ತಮ ಬೆಳವಣಿಗೆ ಹೊಂದುತ್ತದೆ.

**ಹೂ ಬಿಡುವ ಸಮಯ**

ದಾಳಿಂಬೆಯು ವರ್ಷದಲ್ಲಿ ೩ ಬಾರಿ ಅಂದರೆ, ಜನವರಿ-ಫೆಬ್ರವರಿ (ಅಂಬೆ ಬಹಾರ್), ಮೇ-ಜೂನ್ (ಮೃಗ್ ಬಹಾರ್) ಮತ್ತು ಸೆಪ್ಟಂಬರ್-ಅಕ್ಟೋಬರ್ (ಹಸ್ತ ಬಹಾರ್) ಸಮಯದಲ್ಲಿ ಹೂ ಬಿಡುತ್ತದೆ. **'ಬಹಾರ್'** ಎಂದರೆ ಋತು ಎಂದರ್ಥ.

**ಸಸ್ಯ ಸಂರಕ್ಷಣೆ**

**ಕೀಟಗಳು**

'**೧. ದಾಳಿಂಬೆ ಚಿಟ್ಟೆ** : ಇದು ಅತ್ಯಂತ ಹಾನಿಕಾರಕ ಕೀಟ. ಹೆಣ್ಣು ಚಿಟ್ಟೆ ಹೂ ಅಥವಾ ಹೀಚುಗಳ ಮೇಲೆ ಮೊಟ್ಟೆ ಇಡುತ್ತದೆ. ಮೊಟ್ಟೆಯಿಂದ ಹೊರಬಂದ ಮರಿಹುಳುಗಳು ಬೆಳೆಯುತ್ತಿರುವ ಹೀಚುಗಳನ್ನು ಕೊರೆದು ಒಳಗಿನ ತಿರುಳನ್ನು ಮತ್ತು ಬೀಜಗಳನ್ನು ತಿನ್ನುತ್ತವೆ. ಈ ರೀತಿ ಕೊರೆದ ಕಾಯಿಗಳು ಕೊಳೆತು ಉದುರಿಹೋಗುತ್ತವೆ. ಇದರಿಂದಾಗಿ ಶೇ. ೬೦ರ ವರೆಗೂ ಇಳುವರಿ ಕಡಿಮೆಯಾಗುತ್ತದೆ. ಹುಳುಹತ್ತಿದ ಹಣ್ಣುಗಳಿಗೆ ಮಾರುಕಟ್ಟೆಯಲ್ಲಿ ಬೇಡಿಕೆ ಇರುವುದಿಲ್ಲ.

**ನಿಯಂತ್ರಣ** : ಹೂ ಬಿಡುವ ಸಮಯದಲ್ಲಿ ಒಂದು ಬಾರಿ, ನಂತರ ೨ ವಾರಗಳ ಅಂತರದಲ್ಲಿ ೨ ಬಾರಿ ೨೦ ಮಿ.ಲೀ. ಎಕಾಲಾಕ್ಸ್‌ನ್ನು ೧೦ ಲೀಟರ್ ನೀರಿನಲ್ಲಿ ಬೆರೆಸಿ ಸಿಂಪಡಿಸಬೇಕು. ಮರಿ ಹುಳುಗಳು ಕಾಯಿಯ ಒಳಗೆ ಪ್ರವೇಶಿಸಿದ ನಂತರ ಅವುಗಳ ಹತೋಟಿ ಸಾಧ್ಯವಿಲ್ಲ. ಆದ್ದರಿಂದ ಚಿಟ್ಟೆ ಮೊಟ್ಟೆ ಇಟ್ಟಾಗಲೇ ನಿಯಂತ್ರಣ ಕ್ರಮಗಳನ್ನು ಕೈಗೊಳ್ಳಬೇಕು.

**ರೋಗಗಳು**

**೧. ಎಲೆಚುಕ್ಕೆ ರೋಗ** : ಎಲೆ ಮತ್ತು ಹಣ್ಣುಗಳ ಮೇಲೆ ಚುಕ್ಕೆಗಳು ಕಂಡುಬರುತ್ತವೆ. ಇದರಿಂದಾಗಿ ಎಲೆಗಳು ಉದುರುವುದಲ್ಲದೆ ಚುಕ್ಕೆ ಇರುವ ಹಣ್ಣುಗಳಿಗೆ ಬೇಡಿಕೆ ಕಡಿಮೆ.

**ನಿಯಂತ್ರಣ** : ೩೦ ಗ್ರಾಂ. ಡೈಥೇನ್ ಎಂ-೪೫ ಅಥವಾ ೧೦ ಗ್ರಾಂ ಬಾವಿಸ್ಟಾನ್ ಅಥವಾ ೨೦ ಗ್ರಾಂ ಕ್ಯಾಪ್ಟಾನ್‌ನ್ನು ೧೦ ಲೀಟರು ನೀರಿನಲ್ಲಿ ಬೆರೆಸಿ ೨ ವಾರಗಳಿಗೊಮ್ಮೆ ಸಿಂಪರಿಸಬೇಕು.

**ಹಣ್ಣು ಕೊಳೆ ರೋಗ** : ಇದು ಮಳೆಗಾಲದಲ್ಲಿ ಬರುವ ರೋಗ. ಈ ರೋಗ ತಗುಲಿದ ಹೂ, ಹಣ್ಣು, ಕಾಯಿ ಬಿದ್ದು ಹೋಗುತ್ತವೆ.

**ನಿಯಂತ್ರಣ**

ರೋಗ ತಗುಲಿದ ಚಿಗುರು, ರೆಂಬೆ ಮತ್ತು ಹಣ್ಣುಗಳನ್ನು ತೆಗೆದು ನಾಶ ಮಾಡಬೇಕು. ನಂತರ ಡೈಥೇನ್ ಎಂ-೪೫ ಅಥವಾ ಕ್ಯಾಪ್ಟಾನ್‌ನ್ನು ೧೫ ದಿನಗಳಿಗೊಮ್ಮೆ ಸಿಂಪರಿಸಬೇಕು.

**ಇಳುವರಿ**

ಗಿಡಗಳು ಬೆಳೆದಂತೆಲ್ಲಾ ಇಳುವರಿಯೂ ಹೆಚ್ಚುತ್ತದೆ. ೩ ವರ್ಷದ ಗಿಡಗಳು ೨೦-೨೫ ಹಣ್ಣುಗಳನ್ನು ಕೊಟ್ಟರೆ ೧೦ ವರ್ಷದ ಗಿಡಗಳು ಸರಾಸರಿ ೧೦೦ ರಿಂದ ೧೫೦ ಹಣ್ಣುಗಳನ್ನು ಕೊಡುತ್ತದೆ. ದಾಳಿಂಬೆ ಹೂ ಬಿಟ್ಟಂದಿನಿಂದ ೧೮೦ ದಿನಗಳಲ್ಲಿ ಕುಯ್ಲಿಗೆ ಬರುತ್ತದೆ. ದಾಳಿಂಬೆ ಗಿಡವು ೩೦ ವರ್ಷಗಳವರೆಗೆ ಲಾಭದಾಯಕವಾಗಿ ಇಳುವರಿ ಕೊಡಬಲ್ಲದು.

# ಹಳೆಯ ವಿದ್ಯಾರ್ಥಿಗಳ ೪೫ನೇ ಸರ್ವ-ಸದಸ್ಯರ ಮಹಾಧಿವೇಶನ



ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ

"ಈ ಸಂಸ್ಥೆಯು ನಿಮಗೆ ಕೊಟ್ಟ ಆಶ್ರಯವನ್ನು ಸ್ಮರಿಸಿ ಇದರ ಶ್ರೇಯಸ್ಸು ಮತ್ತು ಅಭಿವೃದ್ಧಿಗೆ ಸೇವೆ ಸಲ್ಲಿಸಲು ನೀವೆಲ್ಲರೂ ಕಂಕಣ ಬದ್ಧರಾಗಿರುವುದು ನನಗೆ ಅತೀವ ಸಂತೋಷ ಮತ್ತು ತೃಪ್ತಿ ತಂದಿದೆ" ಎಂದು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಸಂತಸ ವ್ಯಕ್ತಪಡಿಸಿದರು.

ಪರಮಪೂಜ್ಯ ಶ್ರೀ ಶ್ರೀಗಳವರು ತಾ. ೧೨.೧೨.೯೯ನೇ ಭಾನುವಾರ ಶ್ರೀ ಸಿದ್ಧಗಂಗಾ ಕ್ಷೇತ್ರ ದಲ್ಲಿರುವ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ಆವರಣದಲ್ಲಿ ನಡೆದ ಶ್ರೀಕ್ಷೇತ್ರದ ಹಳೆಯ ವಿದ್ಯಾರ್ಥಿಗಳ ಸಂಘದ ೪೫ನೇ ಸರ್ವ-ಸದಸ್ಯರ ಮಹಾಧಿವೇಶನದ ಸಾನಿಧ್ಯ ವಹಿಸಿ ಆಶೀರ್ವಚನ ನೀಡುತ್ತಿದ್ದರು.

"ಇಂದು ಸಮಾಜ ಜೀವನ ಕಲುಷಿತವಾಗಿದೆ. ಜೂಜು, ಕುಡಿತ, ಹರಟೆ, ಕೆಟ್ಟ ಹವ್ಯಾಸಗಳಲ್ಲಿ ಕಾಲಹರಣ ಹೆಚ್ಚಾಗಿವೆ. ಇದು ಸಮಾಜಕ್ಕೆ ಆರೋಗ್ಯಕರವಲ್ಲ. ಕುಟುಂಬಗಳು ಆದರ್ಶವಾಗಿರಬೇಕು. ಸಮಾಜದ ಹಿತಚಿಂತನೆ ಮಾಡಬೇಕು. ಶಿಕ್ಷಕರು ಮಕ್ಕಳ ಮನಸ್ಸನ್ನು ಅರಿತು ನಿಷ್ಠೆಯಿಂದ, ಆತ್ಮಸಾಕ್ಷಿಯಾಗಿ ಬೋಧನೆ ಮಾಡಬೇಕು. ಕಾಯಕನಿಷ್ಠೆಯನ್ನು ಎಲ್ಲರೂ ಬೆಳೆಸಿಕೊಂಡಾಗ ಮಾತ್ರ ಮಾನವೀಯ ಮೌಲ್ಯಗಳಿಂದ ಕೂಡಿದ ಆದರ್ಶ ಸಮಾಜ ನಿರ್ಮಾಣ ಸಾಧ್ಯ" ಎಂದು ಆಶೀರ್ವದಿಸಿದರು.

ಕಿರಿಯ ಶ್ರೀಗಳಾದ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಮಾತನಾಡುತ್ತಾ, "ಪರಮಪೂಜ್ಯರ ನಿರಂತರ ಸೇವೆ ನಮಗೆ ಮಾರ್ಗದರ್ಶಕವಾಗಿದೆ. ಲೋಕಸೇವೆಯಲ್ಲಿ ಅವರು ಸುಖವನ್ನು, ಆನಂದವನ್ನು ಕಾಣುತ್ತಿದ್ದಾರೆ. ಈ ಶತಮಾನದ ಮಹಾತಪಸ್ವಿಯಾದ ಪೂಜ್ಯರ ಆದರ್ಶವನ್ನು ಪಾಲಿಸುವುದರಿಂದ ಸಮಾಜದ ಅಭಿವೃದ್ಧಿ ಸಾಧ್ಯ" ಎಂದು ಆಶಿಸಿದರು.

ಇದೇ ಸಂದರ್ಭದಲ್ಲಿ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ



ಕ್ಷೇತ್ರವಾರ್ತೆ



ಕಿರಿಯ ಶ್ರೀಶ್ರೀಗಳವರಿಂದ ಆಶೀರ್ವಚನ



ಹಳೆಯ ವಿದ್ಯಾರ್ಥಿಗಳು

ಹೊರತಂದ 2000ನೇ ಇಸವಿಯ ಪ್ಯಾಕೆಟ್ ಕ್ಯಾಲೆಂಡರ್ ಬಿಡುಗಡೆ ಮಾಡಿದರು.

ಪ್ರಾರಂಭದಲ್ಲಿ ಹಳೆ ವಿದ್ಯಾರ್ಥಿ ಸಂಘದ ಪ್ರಧಾನ ಕಾರ್ಯದರ್ಶಿಗಳೂ, ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾ ವಿದ್ಯಾಲಯದ ಪ್ರಾಂಶುಪಾಲರೂ ಆದ ಡಾ. ಎಂ.ಎನ್. ಚನ್ನಬಸಪ್ಪ ಅವರು ಸ್ವಾಗತಿಸಿ ಸಮಾಜದ ಅಭಿವೃದ್ಧಿಗಾಗಿ ಶ್ರೀಕ್ಷೇತ್ರ ಹಾಗೂ ಪರಮಪೂಜ್ಯ ಶ್ರೀಶ್ರೀಗಳು ಸಲ್ಲಿಸಿದ ಕೊಡುಗೆಯನ್ನು ಭಾವುಕರಾಗಿ ಸ್ಮರಿಸಿದರು.

ಸಭೆಯಲ್ಲಿ ಹಳೆಯ ವಿದ್ಯಾರ್ಥಿಗಳಾದ ಸರ್ವಶ್ರೀ ಆರ್. ಮುದ್ದಪ್ಪ, ಕೆ.ವಿ. ರಂಗಸ್ವಾಮಿ, ರಂಗಹನುಮಯ್ಯ, ಡಾ. ಸಿ. ಜಯಣ್ಣ, ಹೆಚ್.ವಿ. ವೀರಭದ್ರಯ್ಯ, ಎಚ್.ಎಸ್. ಸಿದ್ಧಗಂಗಪ್ಪ, ಎಂ. ಶಿವಣ್ಣ, ಹೆಚ್. ಚಂದ್ರಶೇಖರ, ಹೆಚ್.ಬಿ. ನಂಜುಂಡಯ್ಯ, ಯಲದಹಳ್ಳಿ ಬಸವರಾಜು, ವಿದ್ವಾನ್ ಕೆ.ಎಸ್. ಶಿವನಂಜಯ್ಯ, ಸಿದ್ದೇಶ ಮೊದಲಾದವರು ಮಾತನಾಡಿ, ಪೂಜ್ಯ ಶ್ರೀಶ್ರೀಗಳವರು ಸಮಾಜಕ್ಕೆ ಸಲ್ಲಿಸುತ್ತಿರುವ ಸೇವೆಯನ್ನು ಕೃತಜ್ಞತೆಯಿಂದ ಸ್ಮರಿಸಿ, ಕೆಲವು ಅಮೂಲ್ಯ ಸಲಹೆಗಳನ್ನು ನೀಡಿದರು.



ಅದೃಷ್ಟವಂತರಿಗೆ ಶ್ರೀ ಶ್ರೀಗಳವರಿಂದ ನೆನಪಿನ ಕಾಣಿಕೆ

ಶ್ರೀ ಹೆಚ್.ಬಿ. ಗಂಗಾಧರಯ್ಯ ಅವರು ಮಾತನಾಡಿ 'ಸಿದ್ಧಗಂಗಾ' ಮಾಸಪತ್ರಿಕೆ ತುಂಬಾ ಆಕರ್ಷಕವಾಗಿ ಪ್ರಕಟವಾಗುತ್ತಿದ್ದು, ಜನಮೆಚ್ಚುಗೆಯನ್ನು ಪಡೆದಿದೆ. ಪತ್ರಿಕೆಯನ್ನು ಮತ್ತಷ್ಟು ಅರ್ಥಪೂರ್ಣವಾಗಿ ತರಲು ಆಜೀವ ಸದಸ್ಯರ ಸಂಖ್ಯೆ ಹೆಚ್ಚಾಗಬೇಕಾಗಿದೆ. ಹಳೆಯ ವಿದ್ಯಾರ್ಥಿಗಳು ಹಾಗೂ ಅಭಿಮಾನಿಗಳು ಆಜೀವ ಸದಸ್ಯರಾಗಬೇಕೆಂದು ಮನವಿ ಮಾಡಿದರು. 'ಸಿದ್ಧಗಂಗಾ' ಪತ್ರಿಕೆಯ ಕಳೆದ ಸಾಲಿನ ಆಯ-ವ್ಯಯ ವರದಿಯನ್ನು ಮಂಡಿಸಿದರು.

ಹಳೆ ವಿದ್ಯಾರ್ಥಿ ಸಂಘದ ಸಹ ಕಾರ್ಯದರ್ಶಿ ಶ್ರೀ ಕೆ. ಶಿವರುದ್ರಯ್ಯ ಅವರು ಹಳೆ ವಿದ್ಯಾರ್ಥಿ ಸಂಘದ ವಾರ್ಷಿಕ ವರದಿಯನ್ನು, ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನ ಸಮಿತಿಯ ಕಾರ್ಯದರ್ಶಿ ಪ್ರೊ. ಬಿ. ಗಂಗಾಧರಯ್ಯ ಅವರು ಪ್ರಸಕ್ತ ಸಾಲಿನ ಮುಂಗಡ ಬಜೆಟ್‌ನ್ನು, ಸಹಕಾರ್ಯದರ್ಶಿ ಶ್ರೀ ಕೆ. ವೀರಭದ್ರಯ್ಯ ಅವರು ಕಳೆದ ಸಾಲಿನ ಆಯ-ವ್ಯಯದ ವರದಿಯನ್ನು ಮಂಡಿಸಿದರು.

ಸಭೆಯಲ್ಲಿ ನಿತ್ಯ ದಾಸೋಹ ನಿಧಿಗೆ ೨,೦೦೧ ರೂ.ಗಳನ್ನು ಶ್ರೀ ಶ್ರೀಗಳವರ ಶತಮಾನೋತ್ಸವ ನಿಧಿಗೆ ೧,೦೦೧ ರೂ.ಗಳನ್ನು ನೀಡುವುದರ ಮೂಲಕ ಉದ್ದೇಶಿತ ಯೋಜನೆಗಳು ಯಶಸ್ವಿಯಾಗಲು ಸಹಕರಿಸಬೇಕೆಂದು ಕೋರಲಾಯಿತು. ಸಭೆಯಲ್ಲಿ ಹಾಜರಿದ್ದ ಸದಸ್ಯರಲ್ಲಿ ಅದೃಷ್ಟವಂತರಾಗಿ ಆಯ್ಕೆಯಾದ ಅದೃಷ್ಟವಂತರಿಗೆ ಪರಮಪೂಜ್ಯ ಶ್ರೀ ಶ್ರೀಗಳು ನೆನಪಿನ ಕಾಣಿಕೆ ನೀಡಿ ಆಶೀರ್ವದಿಸಿದರು. ●

## ಕನ್ನಡ ರಾಜ್ಯೋತ್ಸವ ಮತ್ತು ಮಕ್ಕಳ ದಿನಾಚರಣೆ

"ನಮಗೆ ಒಳ್ಳೆಯ ಸಾಂಸ್ಕೃತಿಕ ಪರಂಪರೆ, ಧರ್ಮ ಮತ್ತು ಸಂಸ್ಕೃತಿ ಇದೆ. ಸಚ್ಚಾರಿತ್ರ್ಯವೇ ನಾಡಿನ ಆಸ್ತಿ. ಆದುದರಿಂದ ವಿದ್ಯಾರ್ಥಿಗಳ ಜೀವನ ಸಮಾಜದಲ್ಲಿ ಒಳ್ಳೆಯ ವಾತಾವವಣ ಮೂಡಿಸುವಂತಾಗಬೇಕು" ಎಂದು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಕರೆಯಿತ್ತರು. ಶ್ರೀಶ್ರೀಗಳವರು ದಿನಾಂಕ ೩೦.೧೧.೧೯೯೯ರಂದು ಶ್ರೀ ಸಿದ್ಧಗಂಗಾ ಮಠದಲ್ಲಿ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಗಳ ಸಂಯುಕ್ತ ವಿದ್ಯಾರ್ಥಿಸಂಘದ ಆಶ್ರಯದಲ್ಲಿ ಏರ್ಪಡಿಸಲಾಗಿದ್ದ ಕನ್ನಡ ರಾಜ್ಯೋತ್ಸವ ಮತ್ತು ಮಕ್ಕಳ ದಿನಾಚರಣೆ ಕಾರ್ಯಕ್ರಮದ ದಿವ್ಯ ಸಾನಿಧ್ಯ ವಹಿಸಿ ಆಶೀರ್ವಚನ ನೀಡಿದರು. "ಇಂದು ಜೀವನದ ಮೌಲ್ಯಗಳು ನಶಿಸುತ್ತಿವೆ. ದೇಶ ನಿಮ್ಮಿಂದ ಉತ್ತಮ ನಿರೀಕ್ಷೆ ಮಾಡುತ್ತಿದೆ. ಎಲ್ಲರೂ ದುಡಿಮೆ ಮಾಡಬೇಕು. ನಡೆ-ನುಡಿಗಳಲ್ಲಿ ದೊಡ್ಡಸ್ತಿಕೆ ಇರಬೇಕು. ಪ್ರತಿ ವ್ಯಕ್ತಿ ತನ್ನ ಕಾಲಮೇಲೆ ತಾನು ನಿಲ್ಲುವಂತಾಗಬೇಕು. ಎಲ್ಲರೂ ಕ್ರಿಯಾಶೀಲವಾದ ಜೀವನ ಸಾಗಿಸಬೇಕು" ಎಂದು ಕರೆ ನೀಡಿದರು.

ಅಧ್ಯಕ್ಷತೆ ವಹಿಸಿದ್ದ ಕರ್ನಾಟಕ ಸರ್ಕಾರದ ಸಣ್ಣ ಕೈಗಾರಿಕಾ ಸಚಿವರಾದ ಶ್ರೀ ಎಸ್. ಆರ್. ಕಾಶಪ್ಪನವರ್ ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ "ಶ್ರೀ ಶ್ರೀಗಳವರ ಅನುಗ್ರಹದಿಂದ ನೀವು ಕಷ್ಟಪಟ್ಟು ವ್ಯಾಸಂಗ ಮಾಡಿ ಮೇಲೆ ಬರಬೇಕು. ವಿದ್ಯಾರ್ಥಿಗಳ ಮೇಲೆ ಶ್ರೀಗಳವರು ಅಪಾರಪ್ರೀತಿ ತೋರಿಸುತ್ತಿದ್ದಾರೆ. ಇದರ ಪ್ರಭಾವವೇ ಶ್ರೀಗಳವರ ಹೃದಯದಲ್ಲಿ ಸಹಸ್ರ ಸಹಸ್ರ ಬಡ ಮಕ್ಕಳ ಚಿತ್ರಣ ಮೂಡಿರುವುದು. ಮಕ್ಕಳ ಅಭಿವೃದ್ಧಿಗೆ ದೀರ್ಘಕಾಲದಿಂದ ಶ್ರಮಿಸುತ್ತಿದ್ದಾರೆ. ಇವರು ನಾಡಿನ ಪುಣ್ಯಜೀವಿಯಾಗಿದ್ದಾರೆ" ಎಂದು ತಿಳಿಸಿದರು. ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷರಾದ ಶ್ರೀ ಎನ್. ಬಸವಾರಾಧ್ಯ ಅವರು ಮಾತನಾಡುತ್ತಾ, "ಕನ್ನಡ ನಾಡಿನ ಭವ್ಯ ಪರಂಪರೆ, ಇತಿಹಾಸ ಮತ್ತು ಮಾನವೀಯ ಮೌಲ್ಯಗಳನ್ನು ಬೆಳೆಸಿ, ಉಳಿಸುವ ಜವಾಬ್ದಾರಿ ಭಾವಿ ಪ್ರಜೆಗಳಾದ ನಿಮ್ಮ ಮೇಲೆ ಇದೆ. ನೀವು ಜೀವನ ಮೌಲ್ಯಗಳನ್ನು ರಕ್ಷಿಸಿ ನಾಡಿನ ಅಭಿವೃದ್ಧಿಗೆ ಶ್ರಮಿಸುವಂತಹ ಪ್ರಜೆಗಳಾಗಿ ರೂಪುಗೊಳ್ಳಬೇಕು" ಎಂದು ಕರೆಯಿತ್ತರು.

ಶ್ರೀ ಎಸ್. ಶಿವಕುಮಾರ್ ಸ್ವಾಗತಿಸಿದರು. ಶ್ರೀ ಬಿ.ಎಸ್. ಮಲ್ಲಿಕಾರ್ಜುನ ವಂದನೆ ಸಲ್ಲಿಸಿದರು. ಶ್ರೀ ಕಲ್ಲಪ್ಪನವರು ಕಾರ್ಯಕ್ರಮವನ್ನು ನಿರೂಪಿಸಿದರು.

## ವಿಶೇಷೋಪನ್ಯಾಸ ಮಾಲೆ

ತುಮಕೂರು ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ ಮತ್ತು ಶ್ರೀ ಸಿದ್ಧಗಂಗಾ ಮಠದ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಮಹಾಪಾಠಶಾಲೆ ಇವರುಗಳ ಸಂಯುಕ್ತಾಶ್ರಯದಲ್ಲಿ ದಿನಾಂಕ ೧೦.೧೧.೧೯೯೯ ರಿಂದ ದಿನಾಂಕ ೨೨.೧೧.೧೯೯೯ರವರೆಗೆ ವಿಶೇಷೋಪನ್ಯಾಸ ಮಾಲೆಯನ್ನು ಶ್ರೀಕ್ಷೇತ್ರದಲ್ಲಿ ಏರ್ಪಡಿಸಲಾಗಿತ್ತು.

ಶ್ರೀಮಠದಕಿರಿಯ ಶ್ರೀಗಳಾದ ಪರಮಪೂಜ್ಯ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಸಮಾರಂಭವನ್ನು ಉದ್ಘಾಟನೆ ಮಾಡಿದರು. ತುಮಕೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಪ್ರೊ. ಸಿ.ಹೆಚ್. ಮರಿದೇವರು ಅಧ್ಯಕ್ಷತೆ ವಹಿಸಿದ್ದರು.. ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಮಹಾಪಾಠಶಾಲೆಯ ಪ್ರಾಂಶುಪಾಲರಾದ ಶ್ರೀ ಪಿ.ಎನ್. ಚಂದ್ರಶೇಖವಯ್ಯನವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು.

ಹನ್ನೆರಡು ದಿನಗಳ ಕಾಲ ನಡೆದ ವಿಶೇಷೋಪನ್ಯಾಸ ಮಾಲೆಯಲ್ಲಿ ಶ್ರೀ ಎಂ. ಈಶ್ವರಯ್ಯನವರು, ಪ್ರೊ. ಪಿ.ಎಸ್. ಚಂದ್ರಶೇಖರಯ್ಯ, ಶ್ರೀ ಎಂ.ಎಸ್. ದಶರಥ ರಾಮಯ್ಯನವರು, ಪ್ರೊ. ಕೋ.ರಂ. ಬಸವವಾಜು, ಶ್ರೀ ಸೋ.ಮು. ಭಾಸ್ಕರಾಚಾರ್, ಪ್ರೊ. ಸೋ. ನರಸಿಂಹ, ಪ್ರೊ. ಹೆಚ್.ವಿ. ವೀರಭದ್ರಯ್ಯನವರು, ಪ್ರೊ. ಎಸ್. ಷಡಕ್ಷರಿ, ಶ್ರೀ ಜಿ.ಎ. ಶ್ರೀನಿವಾಸಮೂರ್ತಿ, ಶ್ರೀ ಡಿ.ಎಸ್. ಚಂದ್ರಶೇಖರಯ್ಯ, ಶ್ರೀ ಕಠಾವೀರನಹಳ್ಳಿ ನಾಗರಾಜು ಅವರು ಕ್ರಮವಾಗಿ ಮಹಾಕವಿಗಳಾದ ಪಂಪ, ಕಾಳಿದಾಸ, ರನ್ನ, ಭವಭೂತಿ, ಜನ್ನ, ಭಾಸ, ಹರಿಹರ, ದಂಡಿ, ಕುಮಾರವ್ಯಾಸ,ಬಾಣಭಟ್ಟ, ಕುವೆಂಪು ಅವರ ಬಗ್ಗೆ ಉಪನ್ಯಾಸ ನೀಡಿ ಸಾಹಿತ್ಯಾರಾಧಕರ ಮನಸ್ಸಿಗೆ ಆನಂದ ಉಂಟುಮಾಡಿದರು.

ಹಾಸ್ಯಸಾಹಿತಿಗಳಾದ ಗೌಡನಕಟ್ಟೆ ತಿಮ್ಮಯ್ಯನವರು ಹಾಸ್ಯ ಸಾಹಿತ್ಯ ಕುರಿತು ಉಪನ್ಯಾಸ ನೀಡಿದರು. ಶ್ರೀ ಸಿದ್ಧಗಂಗಾ ಕನ್ನಡ ಪಂಡಿತ್ ಕಾಲೇಜಿನ ಸೀನಿಯರ್ ಕನ್ನಡ ಪಂಡಿತರಾದ ಶ್ರೀ ಎಂ. ಈಶ್ವರಯ್ಯನವರು ಈ ವಿಶೇಷ ಉಪನ್ಯಾಸ ಮಾಲೆಯ ಸಂಚಾಲಕರಾಗಿ ತುಂಬಾ ಯಶಸ್ವಿಯಾಗಿ ನಡೆಸಿಕೊಟ್ಟರು.

**ವರದಿ : ಕೆ.ಬಿ. ಶಿವಶಂಕರಯ್ಯ**





## ಬ್ಯಾಲಕೆರೆಯಲ್ಲಿ ಶರಣಮೇಳ

"ಜನರು ಇಂದು ಧರ್ಮವನ್ನು ಮರೆತಿದ್ದಾರೆ. ಸಂಸ್ಕೃತಿಯನ್ನು ಮರೆಯುತ್ತಿದ್ದಾರೆ. ಮನುಷ್ಯ ಮನುಷ್ಯರಾಗುವುದನ್ನು ಮರೆತಿದ್ದಾರೆ. ಬಸವಣ್ಣನವರು ಇಡೀ ಮನುಕುಲಕ್ಕೆ ಆದರ್ಶವಾದ ಮೌಲ್ಯಗಳನ್ನು ನೀಡಿದ್ದಾರೆ. ಅವರು ನೀಡಿದ ಆದರ್ಶಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕು" ಎಂದು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ತಿಳಿಸಿದರು.

ಪೂಜ್ಯ ಶ್ರೀ ಶ್ರೀಗಳವರು ಡಿಸೆಂಬರ್ ೧೪ ರಂದು ಮಾಗಡಿ ತಾಲ್ಲೂಕು ಬ್ಯಾಲಕೆರೆ ಗ್ರಾಮದಲ್ಲಿ ಲಿಂಗೈಕ್ಯ ಬಿ.ಎಸ್. ಹೊನ್ನಪ್ಪನವರ ಶಿವಗಣಾರಾಧನೆ ಅಂಗವಾಗಿ ಏರ್ಪಡಿಸಿದ್ದ ಶರಣಮೇಳದ ದಿವ್ಯ ಸಾನಿಧ್ಯ ವಹಿಸಿ ಆಶೀರ್ವಚನ ನೀಡಿದರು.

"ಪ್ರತಿಯೊಬ್ಬರೂ ತಮ್ಮನ್ನು ಕಾಯಕದಲ್ಲಿ ತೊಡಗಿಸಿಕೊಂಡರೆ ರಾಷ್ಟ್ರದ ಅಭಿವೃದ್ಧಿಯಾಗುತ್ತದೆ. ಶ್ರೀಮಂತ-ಬಡವರ ನಡುವಿನ ಅಸಮಾನತೆ ಕಡಿಮೆಯಾಗುತ್ತದೆ" ಎಂದು



ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರಿಂದ ಅನುಗ್ರಹ ಭಾಷಣ

ತಿಳಿಸಿದ ಶ್ರೀಶ್ರೀಗಳವರು, ಒರಿಸ್ಸಾ ದುರಂತದ ಬಗ್ಗೆ ನೊಂದು ನುಡಿದು, ಉಳ್ಳವರು ಉದಾರವಾಗಿ ನೆರವು ನೀಡಬೇಕು" ಎಂದು ತಿಳಿಸಿದರು. ಲಿಂಗೈಕ್ಯ ಶರಣ ಬಿ.ಎಸ್. ಹೊನ್ನಪ್ಪನವರ ಶರಣ ಜೀವನದ ಬಗ್ಗೆ ಪ್ರಶಂಸಿಸಿದರು.

ಜ್ಯೋತಿ ಬೆಳಗಿಸುವ ಮೂಲಕ ಶರಣ ಮೇಳವನ್ನು ಉದ್ಘಾಟಿಸಿದ ಹೊನ್ನಮ್ಮಗವಿ ಸಂಸ್ಥಾನ ಮಠದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ತಮ್ಮ ಅನುಗ್ರಹ ಭಾಷಣದಲ್ಲಿ ಪ್ರಾರ್ಥನೆಯ ಮಹತ್ವದ ಬಗ್ಗೆ ತಿಳಿಸಿದರು.

ಗದ್ದುಗೆ ಮಠದ ಪೂಜ್ಯ ಶ್ರೀ ಶ್ರೀ ಮಹಾಂತೇಶ ಸ್ವಾಮಿಗಳು "ಮನುಷ್ಯರು ದ್ವೇಷ, ಅಸೂಯೆಗಳನ್ನು ಬಿಟ್ಟು ಜೀವನ ನಡೆಸಬೇಕು" ಎಂದು ತಿಳಿಸಿದರು.

ಪ್ರಸಿದ್ಧ ಜನಪದ ಸಾಹಿತಿಗಳು, ಸಿದ್ಧಗಂಗಾ ಮಾಸಪತ್ರಿಕೆಯ ಸಂಪಾದಕರೂ ಆದ ಪ್ರೊ. ಹೆಚ್.ವಿ. ವೀರಭದ್ರಯ್ಯನವರು ತಮ್ಮ ಉಪನ್ಯಾಸದಲ್ಲಿ "ಶ್ರೀಮಠ ಹಮ್ಮಿಕೊಂಡ ಗ್ರಾಮಾಂತರ ಬಸವ ಜಯಂತಿ ಕಾರ್ಯಕ್ರಮದ ಅಂಗವಾಗಿ ಜಗಜ್ಯೋತಿ ಬಸವೇಶ್ವರ ನಾಟಕ ಉದ್ಘಾಟನೆ ಮಾಡಿಸಿದ ಪುಣ್ಯಗ್ರಾಮ ಬ್ಯಾಲಕೆರೆ. ಅಂದು ಇಲ್ಲಿ ಹಚ್ಚಿದ ಜ್ಯೋತಿ ನಾಡಿನಾದ್ಯಂತ ಬೆಳಕು ನೀಡುತ್ತಾ ೪೯೬ ಪ್ರದರ್ಶನಗಳನ್ನು ಕಂಡಿದೆ. ಪ್ರತಿ ಪ್ರದರ್ಶನ ನೀಡುವಾಗಲೂ ಬ್ಯಾಲಕೆರೆ ಗ್ರಾಮ ನನ್ನ ಕಣ್ಣ ಮುಂದೆ ನಿಲ್ಲುತ್ತದೆ" ಎಂದು ತಿಳಿಸಿದರು.

'ಮಹಾಮನೆ' ಸಂಪಾದಕರು, ಸಿದ್ಧಗಂಗಾ ಮಾಸಪತ್ರಿಕೆಯ ಸಹಸಂಪಾದಕರೂ ಆದ ಶ್ರೀ ಎಚ್.ಎಸ್. ಸಿದ್ಧಗಂಗಪ್ಪನವರು ತಮ್ಮ ಭಾಷಣದಲ್ಲಿ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಸಮಾಜಕ್ಕೆ ಸಲ್ಲಿಸುತ್ತಿರುವ ಅಮೂಲ್ಯ ಸೇವೆಯನ್ನು ಕೃತಜ್ಞತೆಯಿಂದ ಸ್ಮರಿಸಿ, ಲಿಂಗೈಕ್ಯ ಶರಣ ಹೊನ್ನಪ್ಪನವರು



ಶರಣ ಬಂಧುಗಳು

ನಡೆಸಿದ ಉದಾತ್ತ ಜೀವನ, ಅವರಲ್ಲಿನ ಮಾನವೀಯ ಗುಣ ಹಾಗೂ ಲಿಂಗನಿಷ್ಠೆಯ ಬಗ್ಗೆ ಸಭೆಗೆ ಪರಿಚಯ ಮಾಡಿಕೊಟ್ಟರು.

ಬ್ಯಾಲಕೆರೆ ಶ್ರೀ ಶಿವಕುಮಾರ ಸ್ವಾಮಿ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ ಕುಂ.ಶಿ. ಸದಾಶಿವಯ್ಯ ಅವರು ವಿಭೂತಿ ಮತ್ತು ರುದ್ರಾಕ್ಷಿಯ ಮಹತ್ವವನ್ನು ಕುರಿತು ಮಾತನಾಡಿದರು. ಶ್ರೀ ಬಿ.ಆರ್. ನಟರಾಜ ಅವರು ಲಿಂಗೈಕ್ಯ ಹೊನ್ನಪ್ಪನವರ ಸಂಕ್ಷಿಪ್ತ ಪರಿಚಯ ಮಾಡಿಕೊಟ್ಟರು.

ಶ್ರೀ ಪಟೇಲ ಶಿವಣ್ಣನವರು ಸ್ವಾಗತಿಸಿದರು, ಶ್ರೀ ಹೊನ್ನಸಿದ್ಧಪ್ಪ ಅವರು ವಂದಿಸಿದರು. ಶ್ರೀ ರೇವಣಸಿದ್ಧಯ್ಯ ಅವರು ಕಾರ್ಯಕ್ರಮ ನಿರೂಪಿಸಿದರು.

**- ವರದಿ : ಬಿ.ಹೆಚ್. ಚಂದ್ರಶೇಖರಯ್ಯ**

## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 170. | ಶ್ರೀ ಬಿ.ವಿ. ಮಹಾದೇವಯ್ಯ<br>ನಂ. 861, 4ನೇ ಮೇನ್ ರೋಡ್,<br>3ನೇ ಕ್ರಾಸ್, ವಿಜಯನಗರ,<br>ಬೆಂಗಳೂರು-560 040. | 1001-00 |
| 171 | ಶ್ರೀ ಪಿ.ಎಸ್. ಶಂಕರಲಿಂಗಪ್ಪ<br>ನಂ. 460/ಎಚ್, 9ನೇ ಮೇನ್,<br>ಹೊಸಹಳ್ಳಿ,<br>ವಿಜಯನಗರ,<br>ಬೆಂಗಳೂರು-560 040. | 1001-00 |
| 171. | ಡಾ. ನಾಗಭೂಷಣ್<br>ತಂದೆ ಪಿ.ಎಸ್. ಶಂಕರಲಿಂಗಪ್ಪ,<br>ನಂ. 4460/11, 9ನೇ ಮೇನ್, 'ಡಿ'<br>ಹೊಸಹಳ್ಳಿ, ಬೆಂಗಳೂರು-56 | 1001-00 |
| 172. | ಶ್ರೀ ಕೆ.ಜಿ. ರಂಗಯ್ಯ<br>ನಿವೃತ್ತ ಮುಖ್ಯೋಪಾಧ್ಯಾಯರು,<br>ಕೆಂಕೆರೆಪಾಳ್ಯ, ಸುಗ್ಗನಹಳ್ಳಿ ಅಂಚೆ,<br>ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ. | 1001-00 |
| 173. | ಶ್ರೀ ಚನ್ನಬಸಪ್ಪ<br>ತಂದೆ ರಾಚಪ್ಪ ಮಂಗಣ್ಣ,<br>ವಕೀಲರು, ನಂ. 404, ಎಂ.ಜಿ. ರಸ್ತೆ,<br>ತಿಲಕವಾಡಿ, ಬೆಳಗಾವಿ-590 006. | 1001-00 |
| 174. | ಶ್ರೀ ಐ.ಎಸ್. ಸಿದ್ದರಾಮಣ್ಣ<br>ಸಹಾಯಕ ಶಿಕ್ಷಕರು,<br>ಡಾ. ಎಚ್.ಎನ್.ಎಸ್. ಹೈಸ್ಕೂಲ್,<br>ಹೊಸೂರು, ಗೌರಿಬಿದನೂರು ತಾಲ್ಲೂಕು,<br>ತುಮಕೂರು ಜಿಲ್ಲೆ. | 1,001-00 |
| 175. | ಶ್ರೀ ಎಸ್. ರಾಜಣ್ಣ<br>ನಂ. 15, ಕುರುಬರಹಳ್ಳಿ,<br>ಮಹಾಲಕ್ಷ್ಮಿಪುರ,<br>ಬೆಂಗಳೂರು-86 | 1101-00 |
| 176. | ಶ್ರೀ ಆರ್. ಗಂಗಾಧರ ಶರ್ಮಾ<br>ನಿವೃತ್ತ ಶಿಕ್ಷಕರು, ಕಡಬಗೆರೆ ಅಂಚೆ,<br>ತಾವರೆಕೆರೆ ಮಾರ್ಗ,<br>ಬೆಂಗಳೂರು ಉತ್ತರ ತಾಲ್ಲೂಕು. | 1001-00 |
| 177. | ಶ್ರೀ ಚಂದ್ರಯ್ಯ<br>ಸಹಾಯಕರು, ಕೆ.ಇ.ಬಿ. ನಗರ ವಿಭಾಗ,<br>ಕೋಲಾರ | 1001-00 |
| 178. | ಶ್ರೀ ಸಿ.ಕೆ. ಸಿದ್ದಪ್ಪ<br>"ಶ್ರೀನಿವಾಸ ನಿವಾಸ"<br>ನಂ.3682/ಎ2, ತರಳಬಾಳು ಬಡಾವಣೆ,<br>ದಾವಣಗೆರೆ-5 | 1000-00 |
| 179. | ಶ್ರೀ ಬಿ. ಪಂಚಾಚಿಕ್ಷರಯ್ಯ<br>ಶಿಕ್ಷಕರು, ತಗಡೂರು,<br>ಓಬಳಾಪುರ ಅಂಚೆ, ಚನ್ನರಾಯಪಟ್ಟಣ ತಾಲ್ಲೂಕು,<br>ಹಾಸನ ಜಿಲ್ಲೆ. | 1001-00 |
| 180. | ಶ್ರೀ ಬಿ.ಕೆ. ಲಿಂಗಯ್ಯ / ಶಾರದಮ್ಮ<br>ಸುಭಾಷ್‌ನಗರ, ನೆಲಮಂಗಲ,<br>ಬೆಂಗಳೂರು ಗ್ರಾ. ಜಿಲ್ಲೆ. | 1001-00 |
| 181. | ಡಾ. ಬಿ.ಎಸ್. ಶಾರದಾ ಶೈಲೇಂದ್ರ,<br>ನಂ.59, "ಸುಕೃತ", 4ನೇ ಮುಖ್ಯ ರಸ್ತೆ,<br>ಮಾರುತಿ ಬಡಾವಣೆ, ಬೆಂಗಳೂರು-21 | 1001-00 |
| 182. | ಡಾ. ಬಿ.ಆರ್. ಶೈಲೇಂದ್ರ<br>ಕಂಪ್ಯೂಟರ್ ಇಂಜಿನಿಯರ್,<br>ನಂ.59, "ಸುಕೃತ", 4ನೇ ಮುಖ್ಯ ರಸ್ತೆ,<br>ಮಾರುತಿ ಬಡಾವಣೆ, ಬೆಂಗಳೂರು-21 | 1001-00 |
| 183. | ಶ್ರೀ ಕೆ.ಎಲ್. ಸಿದ್ಧಲಿಂಗಯ್ಯ<br>ನಂ. 175, 7ನೇ 'ಬಿ' ಮುಖ್ಯರಸ್ತೆ,<br>ಆರ್.ಪಿ.ಸಿ. ಲೇ ಔಟ್,<br>ವಿಜಯನಗರ,<br>ಬೆಂಗಳೂರು-40 | 1001-00 |

(ಮುಂದುವರಿಯುತ್ತದೆ)





## ಮಹಾದಾಸೋಹ ನಿಧಿಗೆ 1101 ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 142. | ದಿವಂಗತ ಕುಮಾರಿ ನಂದಾದೇವಿ<br>ತಂದೆ ದಿವಂಗತ ಗಂಗಾಧರಯ್ಯ ಇವರ<br>ಸ್ಮರಣಾರ್ಥ ಶ್ರೀಮತಿ ಪಿ. ಜಯಮ್ಮನವರು,<br>ನಂ. 9-5-60, ಕೆ.ಟಿ. ರಸ್ತೆ,<br>ಹಿಂದೂಪುರ, ಆಂಧ್ರಪ್ರದೇಶ | 5,001-00 |
| 143. | ಶ್ರೀ ಎಂ.ಆರ್. ಬೈಲಪ್ಪ,<br>ಶಿಕ್ಷಕರು,<br>ಡಾ. ಎಚ್.ಎನ್. ನ್ಯಾಷನಲ್ ಪ್ರೌಢಶಾಲೆ,<br>ಹೊಸೂರು, ಗೌರಿಬಿದನೂರು ತಾಲ್ಲೂಕು,<br>ಕೋಲಾರ ಜಿಲ್ಲೆ. | 5,001-00 |
| 144. | ಶ್ರೀ ಡಿ.ಎನ್. ನಂಜುಂಡಪ್ಪ,<br>C/o ಶ್ರೀ ಡಿ.ಎಸ್. ಪಶುಪತಿ,<br>ನಂ. 19, ಪಾರ್ಕ್ ರಸ್ತೆ,<br>ಬೆಂಗಳೂರು-53 | 1,101-00 |
| 145. | ಶ್ರೀ ಮಹೇಶ್ ಮತ್ತು ಕುಟುಂಬದವರು<br>C/o ಶ್ರೀ ಎನ್.ಸಿ. ವಿರೂಪಾಕ್ಷಯ್ಯ,<br>ಅಸಿಸ್ಟೆಂಟ್ ಇಂಜಿನಿಯರ್,<br>ನಂ. 112, 3ನೇ ಹಂತ, ವಿನಾಯಕ ಲೇ ಔಟ್,<br>ವಿಜಯನಗರ, ಬೆಂಗಳೂರು-40 | 5,101-00 |
| 146. | ಶ್ರೀ ಜಗದೀಶ್<br>ಸಂಸ್ಕೃತ ಶಿಕ್ಷಕರು, ಸಿದ್ದಗಂಗಾ ಸಂಸ್ಕೃತ ಪಾಠಶಾಲೆ,<br>ಗಂಜಲಗುಂಟೆ, ಮಧುಗಿರಿ ತಾಲ್ಲೂಕು,<br>ತುಮಕೂರು ಜಿಲ್ಲೆ. | 1,101-00 |
| 147 | ಶ್ರೀ ಜ್ಯೋತಿ ಅನಿಲ್ ಡಿ. ಹೇಮಂತ್<br>ನಂ. 33, ಹೇಮಂತ್ ಹೌಸ್,<br>ಮಂಗಲವಾಡಿ, ಗಿಸ್‌ಗಾವ್,<br>ಮುಂಬೈ-400 004 | 1,001-00 |
| 148. | ಶ್ರೀ ಕೌಸಲ್ಯ ವಿಶ್ವನಾಥ್ ಅಂಡ್ ಸನ್ಸ್,<br>'ಡಿ' ಬ್ರಿಜೇಶ್ ಅಂಡ್ ಪ್ರೀತೇಶ್,<br>ನಂ. 587, 4ನೇ ಕ್ರಾಸ್,<br>9ನೇ ಮುಖ್ಯರಸ್ತೆ, ವಿಜಯನಗರ,<br>ಮೈಸೂರು-17 | 1,001-00 |
| 149. | ಶ್ರೀ ಮಮತ ಶಿವದಾಸ್<br>C/o ಶ್ರೀ ಪಿ.ಎನ್. ಶಿವದಾಸ್,<br>ಪ್ಲಾಂಟರ್ಸ್,<br>ಫಾಲ್‌ಘಾಟ್ ಜಿಲ್ಲೆ,<br>ಕೇರಳ ರಾಜ್ಯ | 1,001-00 |
| 151. | ದಿವಂಗತ ಸಿದ್ಧಲಿಂಗಾಚಾರ್ ಸ್ಮರಣಾರ್ಥ<br>ಶ್ರೀಮತಿ ವೆಂಕಟೇಶಮ್ಮ,<br>ನಂ. 81/33, 4ನೇ ಕ್ರಾಸ್,<br>12ನೇ ಡಿ ಮುಖ್ಯರಸ್ತೆ,<br>ಮಂಜುನಾಥನಗರ, ಬೆಂಗಳೂರು-10 | 1,001-00 |
| 151. | ಶ್ರೀಮತಿ ಗಂಗೂಬಾಯಿ ಆರ್. ಫೋಲೆ<br>ನಂ. 221, 5ನೇ ಮುಖ್ಯರಸ್ತೆ,<br>ಎನ್.ಆರ್. ಕಾಲೋನಿ, ಬೆಂಗಳೂರು-19 | 5,111-00 |
| 152. | ಶ್ರೀ ಚನ್ನಬಸಪ್ಪ<br>ತಂದೆ ಮಾಚಪ್ಪ ಮಾಗಣ್ಣ, ಅಡ್ವೋಕೇಟ್,<br>ನಂ. 404, ಎಂ.ಜಿ. ರಸ್ತೆ,<br>ತಿಲಕವಾಡಿ ಅಂಚೆ, ಬೆಳಗಾವಿ-590 006 | 1,001-00 |
| 153. | ಶ್ರೀ ನೀಲಂ ಪವನಕುಮಾರ್<br>ನಂ. 215, "ಸಂತೋಷ್ ನಿವಾಸ್"<br>ಜೈಮಿನಿ ಡಿಸ್ಟಿಲರಿ ಬಳಿ, ನೆಲಗದರನಹಳ್ಳಿ ಮುಖ್ಯರಸ್ತೆ,<br>ನಾಗಸಂದ್ರ ಅಂಚೆ,<br>ಬೆಂಗಳೂರು-79 | 1,001-00 |
| 154. | ಶ್ರೀ ಎಚ್.ಆರ್. ಶರಭಯ್ಯ<br>ಹೊಸಪೇಟೆ ಮುಖ್ಯರಸ್ತೆ, ಮಾಗಡಿ ಟೌನ್,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | 1,001-00 |
| 155. | ಶ್ರೀ ಎನ್.ಆರ್. ಪರಮಶಿವಯ್ಯ<br>ನೇರಲಾಪುರ, ಸಾಸಲು ಅಂಚೆ,<br>ತುಮಕೂರು ತಾಲ್ಲೂಕು ಮತ್ತು ಜಿಲ್ಲೆ. | 1,001-00 |
| 156. | ಶ್ರೀ ಚಂದ್ರಯ್ಯ<br>ಸಹಾಯಕರು, ಕೆ.ಇ.ಬಿ.,<br>ನಾಗರ್ ಸಬ್ ಸೆಕ್ಷನ್, ಕೋಲಾರ-563 101. | 1,001-00 |
| 157. | ಶ್ರೀ ಯು.ಎಂ. ತೀರ್ಥ ಮಲ್ಲೇಶ್<br>ಕಾಫಿ ಪ್ಲಾಂಟರ್, ಉಂಬಳಗೋಡು ಎಸ್ಟೇಟ್,<br>ಮಲಸಾವರ ಅಂಚೆ, ಬೇಲೂರು ತಾಲ್ಲೂಕು,<br>ಹಾಸನ ಜಿಲ್ಲೆ. | 1,101-00 |
| 158. | ಶ್ರೀ ಇ.ಜಿ. ರಮೇಶ್<br>ನಂ. 2942/E, ಮೈತಮ್,<br>ಮಾರುತಿ ಮಂದಿರದ ಮುಂಭಾಗ,<br>ಜಯನಗರ 3ನೇ ಹಂತ, ಆರ್.ಪಿ.ಸಿ. ಲೇ ಔಟ್,<br>ಬೆಂಗಳೂರು-560 040. | 1,108-00 |

(ಮುಂದುವರಿಯುತ್ತದೆ)

ಹಾರ್ದಿಕ ಶುಭಾಶಯಗಳೊಂದಿಗೆ (ಸ್ಥಾಪನೆ : 1982)

## ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ ನೌಕರರ ಪತ್ತಿನ ಸಹಕಾರ ಸಂಘ ನಿಯಮಿತ

ಎಸ್.ಐ.ಟಿ. ಕ್ಯಾಂಪಸ್, ತುಮಕೂರು-572 103

| | | |
|---|---|---|
| ಸದಸ್ಯರ ಸಂಖ್ಯೆ | : | 1072 |
| ಷೇರು ಮೊಬಲಗು | : | ರೂ. 16,03,400.00 |
| ವಾರ್ಷಿಕ ವಹಿವಾಟು | : | ರೂ. 1.8 ಕೋಟಿ |
| ಖಾಯಂ ಠೇವಣಿ ಮೇಲಿನ ಬಡ್ಡಿ | : | 46 ದಿನಗಳಿಂದ 1 ವರ್ಷಕ್ಕೆ 12.5% |
| | : | 1 ವರ್ಷದಿಂದ 2 ವರ್ಷಕ್ಕೆ 13.5% |
| | : | 2 ವರ್ಷದಿಂದ 3 ವರ್ಷಕ್ಕೆ 15.0% |
| | : | 3 ವರ್ಷಕ್ಕೆ ಮೇಲ್ಪಟ್ಟು 16.0% |
| ಸದಸ್ಯರುಗಳಿಗೆ ಸಾಲದ ಸೌಲಭ್ಯ | : | ರೂ. 50,000.00 ಗಳವರೆಗೆ |

ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು - ಗೌರವಾಧ್ಯಕ್ಷರು

ಪ್ರೊ. ಬಿ. ಗಂಗಾಧರಯ್ಯ ಅಧ್ಯಕ್ಷರು ಶ್ರೀ ಎಸ್. ವಿಶ್ವನಾಥಯ್ಯ ಉಪಾಧ್ಯಕ್ಷರು

---

ಶುಭಾಶಯಗಳೊಂದಿಗೆ

ಸ್ಥಾಪನೆ : 1995 ಭಾರತೀಯ ರಿಸರ್ವ್ ಬ್ಯಾಂಕ್ ಲೈಸೆನ್ಸ್ ಪುರಸ್ಕೃತ ದೂರವಾಣಿ : 77267

## ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,

ಬಿ. ಹೆಚ್. ರಸ್ತೆ, ತುಮಕೂರು - 572102

**ಪ್ರಗತಿ ನೋಟ** (31-1-1998ರಲ್ಲಿದ್ದಂತೆ)

ಸದಸ್ಯರ ಸಂಖ್ಯೆ - 2861

(ಲಕ್ಷ ರೂ.ಗಳಲ್ಲಿ)

| | | | |
|---|---|---|---|
| ಅಧಿಕೃತ ಷೇರು ಬಂಡವಾಳ | 50.00 | ಠೇವಣಿಗಳು | 719.15 |
| ಪಾವತಿಯಾದ ಷೇರು ಬಂಡವಾಳ | 46.94 | ಚಾಲ್ತಿ ಬಂಡವಾಳ | 776.91 |
| ಕಾಯ್ದಿರಿಸದ ನಿಧಿಗಳು | 10.82 | ಸಾಲಗಳು | 496.63 |

***ನಿಶ್ಚಿತ ಠೇವಣಿಗಳ ಮೇಲೆ ನೀಡುವ ಬಡ್ಡಿ ದರ (9.5.1998 ರಿಂದ)***

| | | | |
|---|---|---|---|
| 30 ದಿವಸದಿಂದ 180 ದಿನಗಳವರೆಗೆ | - 10% | 181 ದಿವಸಗಳಿಂದ 1 ವರ್ಷದವರೆಗೆ | - 11% |
| 1 ವರ್ಷದಿಂದ 2 ವರ್ಷಗಳವರೆಗೆ | - 12% | 2 ವರ್ಷದಿಂದ ಮೇಲ್ಪಟ್ಟು | - 13% |
| ಉಳಿತಾಯ ಖಾತೆ | 5.5% | | |

ಶ್ರೀ ಟಿ. ಕೆ. ನಂಜುಂಡಪ್ಪ ಅಧ್ಯಕ್ಷರು ಶ್ರೀ ಕೆ. ಎಸ್. ಶಂಕರಯ್ಯ ಉಪಾಧ್ಯಕ್ಷರು ನಟರಾಜು ವ್ಯವಸ್ಥಾಪಕರು



# ವೀರಶೈವ ಸಹಕಾರ ಬ್ಯಾಂಕ್ ನಿಯಮಿತ

ಅಕ್ಕಿಪೇಟೆ, ಬೆಂಗಳೂರು - 560 053. ✆ :2282224, 2871003,

**ಶಾಖೆಗಳು :**

ನಂ. 265/ಡಿ, ಕನಕಪುರ ಮುಖ್ಯ ರಸ್ತೆ, 7ನೇ ಬ್ಲಾಕ್, ಜಯನಗರ, ಬೆಂಗಳೂರು-82 ✆ : 6541983

ನಂ. 391/32, 12ನೇ ಮುಖ್ಯರಸ್ತೆ, 6ನೇ ವಿಭಾಗ, ಡಾ. ರಾಜಕುಮಾರ್ ರಸ್ತೆ, ರಾಜಾಜಿನಗರ, ಬೆಂಗಳೂರು-10. ✆ : 3402145

ನಂ. 32, ಎಂ.ಸಿ. ಬಡಾವಣೆ, ಎಂ.ಸಿ. ರಸ್ತೆ, ವಿಜಯನಗರ (ಬಸ್ ಸ್ಟಾಪ್ ಹತ್ತಿರ) ಬೆಂಗಳೂರು-560 040. ✆ : 3358017

ನಂ. 324, 8ನೇ ಮುಖ್ಯರಸ್ತೆ, 1ನೇ ಅಡ್ಡರಸ್ತೆ, 3ನೇ ಹಂತ, ಬಸವೇಶ್ವರನಗರ, ಬೆಂಗಳೂರು-79. ✆ : 3485393.

- ❖ ರಿಸರ್ವ್ ಬ್ಯಾಂಕ್ ನಿಯಮಾವಳಿಗೆ ಒಳಪಟ್ಟಿದೆ.
- ❖ ಸೇಫ್ ಡಿಪಾಸಿಟ್ ಲಾಕರುಗಳ ವ್ಯವಸ್ಥೆಯಿದೆ.
- ❖ ಠೇವಣಿಗಳಿಗೆ ವಿಮಾ ಸೌಲಭ್ಯ ಒದಗಿಸಲಾಗಿದೆ.

ಠೇವಣಿಗಳ ಮೇಲೆ ವಾಣಿಜ್ಯ ಬ್ಯಾಂಕುಗಳಿಗಿಂತ ಶೇಕಡ ½ದಷ್ಟು ಅಧಿಕ ಬಡ್ಡಿ ದೊರೆಯುತ್ತದೆ. ನೀವು ತೊಡಗಿಸುವ ಹಣಕ್ಕೆ ಸುರಕ್ಷೆ ಒದಗಿಸುವ ಸಂಸ್ಥೆ. ನೀವು ತೊಡಗಿಸುವ ಹಣವನ್ನು ಇಮ್ಮಡಿಯಾಗಿ ಅಥವಾ ಮುಮ್ಮಡಿಯಾಗಿ ಹೆಚ್ಚಿಸುವ ಅವಕಾಶವಿರುವ ಸಂಸ್ಥೆ. ನಿಮ್ಮ ಮಕ್ಕಳ, ನಿಮ್ಮ ಆಶ್ರಿತರ ಹಾಗೂ ನಿಮ್ಮ ಭವಿಷ್ಯದ ಹಿತರಕ್ಷಣೆ ಮಾಡುವ ಸಂಸ್ಥೆ.

***(30-11-1999ಕ್ಕೆ) (ಲಕ್ಷ ರೂ.ಗಳಲ್ಲಿ)***

| | | | |
|---|---|---|---|
| ಷೇರು ಬಂಡವಾಳ | : 102.90 | ಹೂಡಿಕೆಗಳು | : 1676.97 |
| ಸಾಲಗಳು ಮತ್ತು ಮುಂಗಡ | : 1705.61 | ದುಡಿಯುವ ಬಂಡವಾಳ | : 3587.85 |
| ಠೇವಣಿಗಳು | : 3346.77 | ಕಾಯ್ದಿಟ್ಟ ಹಾಗೂ ಇತರೆ ನಿಧಿಗಳು | : 138.18 |

ಶ್ರೀ ಆರ್. ನೀಲಕಂಠಯ್ಯ
ಅಧ್ಯಕ್ಷರು

ಶ್ರೀ ಎಲ್. ರಾಜಪ್ಪ
ಉಪಾಧ್ಯಕ್ಷರು

**ನಿರ್ದೇಶಕರು**

ಶ್ರೀ ಬಿ.ಎಸ್. ಪರಮಶಿವಯ್ಯ
ಶ್ರೀ ಬಿ.ಜಿ. ನಾಗಬಸಪ್ಪ
ಶ್ರೀ. ಜಿ. ಶಿವಕುಮಾರ್
ಶ್ರೀ ಆರ್.ಜಿ. ಶಿವಕುಮಾರ್
ಶ್ರೀ ಎನ್.ಎಸ್. ಶಿವಶಂಕರ್
ಶ್ರೀಮತಿ ಜಿ.ಎನ್. ಚಂದ್ರಾವತಿ ಬಿ.ಟಿ. ಉಮೇಶ್

ಶ್ರೀ ವೈ.ಟಿ. ಮಹಾದೇವಪ್ಪ
ಡಾ. ಮಲ್ಲಿಕಾರ್ಜುನ
ಶ್ರೀ ಬಿ.ಎಸ್. ಸಚ್ಚಿದಾನಂದಮೂರ್ತಿ
ಶ್ರೀ ಬಿ.ಎಸ್. ಬಾಲರಾಜ್
ಶ್ರೀ ಕೆ.ಆರ್. ರಾಮಯ್ಯ

ಪ್ರಧಾನ ವ್ಯವಸ್ಥಾಪಕರು
ಶ್ರೀ ಬಿ.ವಿ. ನಾಗರಾಜ

"Siddaganga" Monthly Reg. No. KRNQ-9

# ಸಿದ್ಧಗಂಗಾ

# 2000

|| ಓಂ ಶ್ರೀ ಗುರು ಬಸವ ಲಿಂಗಾಯನಮಃ ||

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಪೆನು ಬಸವೇಶ**

## ಜನವರಿ

| | | | | | |
|---|---|---|---|---|---|
| ಭಾನು | 30 | 2 | 9 | 16 | 23 |
| ಸೋಮ | 31 | 3 | 10 | 17 | 24 |
| ಮಂಗಳ | ✡ | 4 | 11 | 18 | 25 |
| ಬುಧ | ✡ | 5 | 12 | 19 | 26 |
| ಗುರು | ✡ | 6 | 13 | 20 | 27 |
| ಶುಕ್ರ | ✡ | 7 | 14 | 21 | 28 |
| ಶನಿ | 1 | 8 | 15 | 22 | 29 |

## ಫೆಬ್ರುವರಿ

| | | | | | |
|---|---|---|---|---|---|
| ಭಾನು | ✡ | 6 | 13 | 20 | 27 |
| ಸೋಮ | ✡ | 7 | 14 | 21 | 28 |
| ಮಂಗಳ | 1 | 8 | 15 | 22 | 29 |
| ಬುಧ | 2 | 9 | 16 | 23 | ✡ |
| ಗುರು | 3 | 10 | 17 | 24 | ✡ |
| ಶುಕ್ರ | 4 | 11 | 18 | 25 | ✡ |
| ಶನಿ | 5 | 12 | 19 | 26 | ✡ |

## ಮಾರ್ಚ್

| | | | | | |
|---|---|---|---|---|---|
| ಭಾನು | ✡ | 5 | 12 | 19 | 26 |
| ಸೋಮ | ✡ | 6 | 13 | 20 | 27 |
| ಮಂಗಳ | ✡ | 7 | 14 | 21 | 28 |
| ಬುಧ | 1 | 8 | 15 | 22 | 29 |
| ಗುರು | 2 | 9 | 16 | 23 | 30 |
| ಶುಕ್ರ | 3 | 10 | 17 | 24 | 31 |
| ಶನಿ | 4 | 11 | 18 | 25 | ✡ |

## ಏಪ್ರಿಲ್

| | | | | | |
|---|---|---|---|---|---|
| ಭಾನು | 30 | 2 | 9 | 16 | 23 |
| ಸೋಮ | ✡ | 3 | 10 | 17 | 24 |
| ಮಂಗಳ | ✡ | 4 | 11 | 18 | 25 |
| ಬುಧ | ✡ | 5 | 12 | 19 | 26 |
| ಗುರು | ✡ | 6 | 13 | 20 | 27 |
| ಶುಕ್ರ | ✡ | 7 | 14 | 21 | 28 |
| ಶನಿ | 1 | 8 | 15 | 22 | 29 |

## ಮೇ

| | | | | | |
|---|---|---|---|---|---|
| ಭಾನು | ✡ | 7 | 14 | 21 | 28 |
| ಸೋಮ | 1 | 8 | 15 | 22 | 29 |
| ಮಂಗಳ | 2 | 9 | 16 | 23 | 30 |
| ಬುಧ | 3 | 10 | 17 | 24 | 31 |
| ಗುರು | 4 | 11 | 18 | 25 | ✡ |
| ಶುಕ್ರ | 5 | 12 | 19 | 26 | ✡ |
| ಶನಿ | 6 | 13 | 20 | 27 | ✡ |

## ಜೂನ್

| | | | | | |
|---|---|---|---|---|---|
| ಭಾನು | ✡ | 4 | 11 | 18 | 25 |
| ಸೋಮ | ✡ | 5 | 12 | 19 | 26 |
| ಮಂಗಳ | ✡ | 6 | 13 | 20 | 27 |
| ಬುಧ | ✡ | 7 | 14 | 21 | 28 |
| ಗುರು | 1 | 8 | 15 | 22 | 29 |
| ಶುಕ್ರ | 2 | 9 | 16 | 23 | 30 |
| ಶನಿ | 3 | 10 | 17 | 24 | ✡ |

## ಜುಲೈ

| | | | | | |
|---|---|---|---|---|---|
| ಭಾನು | 30 | 2 | 9 | 16 | 23 |
| ಸೋಮ | 31 | 3 | 10 | 17 | 24 |
| ಮಂಗಳ | ✡ | 4 | 11 | 18 | 25 |
| ಬುಧ | ✡ | 5 | 12 | 19 | 26 |
| ಗುರು | ✡ | 6 | 13 | 20 | 27 |
| ಶುಕ್ರ | ✡ | 7 | 14 | 21 | 28 |
| ಶನಿ | 1 | 8 | 15 | 22 | 29 |

## ಆಗಸ್ಟ್

| | | | | | |
|---|---|---|---|---|---|
| ಭಾನು | ✡ | 6 | 13 | 20 | 27 |
| ಸೋಮ | ✡ | 7 | 14 | 21 | 28 |
| ಮಂಗಳ | 1 | 8 | 15 | 22 | 29 |
| ಬುಧ | 2 | 9 | 16 | 23 | 30 |
| ಗುರು | 3 | 10 | 17 | 24 | 31 |
| ಶುಕ್ರ | 4 | 11 | 18 | 25 | ✡ |
| ಶನಿ | 5 | 12 | 19 | 26 | ✡ |

## ಸೆಪ್ಟೆಂಬರ್

| | | | | | |
|---|---|---|---|---|---|
| ಭಾನು | ✡ | 3 | 10 | 17 | 24 |
| ಸೋಮ | ✡ | 4 | 11 | 18 | 25 |
| ಮಂಗಳ | ✡ | 5 | 12 | 19 | 26 |
| ಬುಧ | ✡ | 6 | 13 | 20 | 27 |
| ಗುರು | ✡ | 7 | 14 | 21 | 28 |
| ಶುಕ್ರ | 1 | 8 | 15 | 22 | 29 |
| ಶನಿ | 2 | 9 | 16 | 23 | 30 |

## ಅಕ್ಟೋಬರ್

| | | | | | |
|---|---|---|---|---|---|
| ಭಾನು | 1 | 8 | 15 | 22 | 29 |
| ಸೋಮ | 2 | 9 | 16 | 23 | 30 |
| ಮಂಗಳ | 3 | 10 | 17 | 24 | 31 |
| ಬುಧ | 4 | 11 | 18 | 25 | ✡ |
| ಗುರು | 5 | 12 | 19 | 26 | ✡ |
| ಶುಕ್ರ | 6 | 13 | 20 | 27 | ✡ |
| ಶನಿ | 7 | 14 | 21 | 28 | ✡ |

## ನವೆಂಬರ್

| | | | | | |
|---|---|---|---|---|---|
| ಭಾನು | ✡ | 5 | 12 | 19 | 26 |
| ಸೋಮ | ✡ | 6 | 13 | 20 | 27 |
| ಮಂಗಳ | ✡ | 7 | 14 | 21 | 28 |
| ಬುಧ | 1 | 8 | 15 | 22 | 29 |
| ಗುರು | 2 | 9 | 16 | 23 | 30 |
| ಶುಕ್ರ | 3 | 10 | 17 | 24 | ✡ |
| ಶನಿ | 4 | 11 | 18 | 25 | ✡ |

## ಡಿಸೆಂಬರ್

| | | | | | |
|---|---|---|---|---|---|
| ಭಾನು | 31 | 3 | 10 | 17 | 24 |
| ಸೋಮ | ✡ | 4 | 11 | 18 | 25 |
| ಮಂಗಳ | ✡ | 5 | 12 | 19 | 26 |
| ಬುಧ | ✡ | 6 | 13 | 20 | 27 |
| ಗುರು | ✡ | 7 | 14 | 21 | 28 |
| ಶುಕ್ರ | 1 | 8 | 15 | 22 | 29 |
| ಶನಿ | 2 | 9 | 16 | 23 | 30 |

Printed at : Geetanjali Printers, Bangalore-54